# ಕಾವ್ಯಮಂಜರಿ

ಭಾಗ ೨

ಸಂಪುಟ ೨



(೨)

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

೧೯೫೯



ಪ್ರಕಾಶಕರು:
ಎಸ್.ಎಸ್. ಒಡೆಯರ,
ಎಂ. ಎ. ಎಲ್ ಎಲ್. ಬಿ.
ರಜಿಸ್ಟ್ರಾರರು.

ದ್ವಿತೀಯ ಮುದ್ರಣ
೧೯೫೯



ಬೆಲೆ : ಒಂದು ರೂಪಾಯಿ



ಮುದ್ರಕರು :
ಎಂ. ಬಿ ವರೂರ
ಆನಂದ ಪ್ರಿಂಟಿಂಗ ಪ್ರೆಸ್,
ಹುಬ್ಬಳ್ಳಿ.

# ಮುನ್ನುಡಿ

ಕರ್ನಾಟಕ ವಿದ್ಯಾಪೀಠದವರು ಪ್ರಕಟಿಸುತ್ತಿರುವ 'ಕಾವ್ಯಮಂಜರಿ' ಎಂಬ ಸಂಕಲನಗಳು ವಿದ್ಯಾರ್ಥಿಗಳಿಗೆ ತುಂಬ ಉಪಯುಕ್ತವಾಗಿವೆಯೆಂದು ಕಂಡುಬಂದಿದೆ. ಆದುದರಿಂದ ಇಂಟರ ಆರ್ಟ್ಸ ಪರೀಕ್ಷೆಗಾಗಿ ಮತ್ತೆ ಇಂತಹ ಕಾವ್ಯ ಸಂಕಲನವನ್ನು ಸಿದ್ಧಗೊಳಿಸಬೇಕೆಂದು ಕನ್ನಡ ಅಭ್ಯಾಸ ನಿಯಾಮಕ ಮಂಡಲದವರು ನಿರ್ಣಯಿಸಿದರು. ಈ ನಿರ್ಣಯಕ್ಕೆ ವಿಶ್ವ ವಿದ್ಯಾಲಯದ ಒಪ್ಪಿಗೆ ದೊರೆಯಿತು. ಅಭ್ಯಾಸ ನಿಯಾಮಕ ಮಂಡಲದವರು ಸಂಕಲನದ ಸಂಪಾದನೆಯ ಕಾರ್ಯಕ್ಕಾಗಿ ಪ್ರೊ. ಸ. ಸ. ಮಾಳವಾಡ (ಅಧ್ಯಕ್ಷ), ಪ್ರೊ. ವ್ಹಿ. ಜಿ. ಕುಲಕರ್ಣಿ ಹಾಗೂ ಡಾ. ಆರ್. ಸಿ. ಹಿರೇಮಠ ಇವರನ್ನೊಳಗೊಂಡ ಉಪಸಮಿತಿಯನ್ನು ನಿಯಮಿಸಿದರು. ಉಪಸಮಿತಿ ಯವರು ಈ ಕಾವ್ಯಸಂಕಲನದ ವಿಷಯವನ್ನು ಕೂಲಂಕಷವಾಗಿ ಚರ್ಚಿ ಸಿದರು.

೧. ಈ ಸಂಗ್ರಹದಲ್ಲಿ ಹಳಗನ್ನಡ, ನಡುಗನ್ನಡ ಹಾಗೂ ಹೊಸ ಗನ್ನಡ ಈ ಮೂರೂ ವಿಭಾಗಗಳಿಂದ ಆಯ್ದುಕೊಂಡ ಕಾವ್ಯ ಭಾಗಗಳಿರತಕ್ಕದ್ದು.

೨. ಹೀಗೆ ಸಂಗ್ರಹಿಸಿದ ಭಾಗಗಳು ಅಭ್ಯಾಸಕ್ಕೆ ಹೆಚ್ಚು ಅನುಕೂಲ ವಾಗುವಂತೆ ತಕ್ಕ ಮಟ್ಟಿಗೆ ದೀರ್ಘವಾಗಿಯೇ ಇರಬೇಕು. ಕಾರಣ, ಹಳಗನ್ನಡ, ನಡುಗನ್ನಡ ವಿಭಾಗದೊಳಗೆ ಹೆಚ್ಚು ಜನ ಕವಿಗಳ ಕಾವ್ಯಭಾಗಗಳನ್ನಾಯ್ದುಕೊಳ್ಳದೆ ಕೇವಲ ಅಯ್ವರಿಂದ ಮಾತ್ರ ಸಂಗ್ರಹಿಸತಕ್ಕದ್ದು.

೩. ಇಲ್ಲಿ ಸಂಗ್ರಹವ ದ ಕಾವ್ಯಭಾಗಗಳು ರಸ, ಶೈಲಿಗಳ ದೃಷ್ಟಿಯಿಂದ ವಿದ್ಯಾರ್ಥಿಗಳ ಮನಸ್ಸನ್ನು ಆಕರ್ಷಿಸುವಂತಹವಿರಬೇಕು.

ಈ ನಿರ್ದೇಶಕ ತತ್ವಗಳನ್ನು ಉಪಸಮಿತಿಯವರು ಒಪ್ಪಿಕೊಂಡರು. ಈ ನಿರ್ಣಯಗಳನ್ವಯ ರನ್ನ, ನಾಗಚಂದ್ರ, ಹರಿಹರ, ರಾಘವಾಂಕ, ಕುಮಾರವ್ಯಾಸ, ಬಸವಪ್ಪಶಾಸ್ತ್ರಿ, ಶಾಂತಕವಿ, ಪಂಜೆ ಮಂಗೇಶರಾಯ ಮಧುರಚೆನ್ನ ಹಾಗೂ ಜಾನಪದಕವಿ ಈ ಕವಿಗಳ ಕಾವ್ಯಭಾಗಗಳನ್ನು ಈ ಸಂಕಲನದಲ್ಲಿ ಸಂಗ್ರಹಿಸಲಾಗಿದೆ. ಹೀಗೆ ಸಂಗ್ರಹಿಸುವಾಗ ಭಾವ, ಭಾಷೆ, ವಿಚಾರಗಳ ಪರಿಪಕ್ವತೆಯ ಕಡೆಗೆ ಗಮನ ಕೊಡಲಾಗಿದೆ. ಸಂಗ್ರಹದ ಕೊನೆಗೆ ಕವಿಗಳ ಅಲ್ಪಪರಿಚಯವನ್ನೂ ಕಿರಿಯ ಅರ್ಥಕೋಶವನ್ನೂ ಒದಗಿಸಲಾಗಿದೆ. ಈ ಸಂಕಲನವು ವಿದ್ಯಾರ್ಥಿಗಳಿಗೂ ಸಾಹಿತ್ಯಾಭ್ಯಾಸಿಗಳಿಗೂ ಪ್ರಯೋಜನಕಾರಿಯಾಗುವುದೆಂದು ನಂಬಲಾಗಿದೆ.

ಉಪಸಮಿತಿಯವರು ಈ ಸಂಕಲನವನ್ನು ಸಂಗ್ರಹಿಸಿ ಸಂಪಾದಿಸುವಲ್ಲಿ ವಿಶೇಷ ಪರಿಶ್ರಮವಹಿಸಿದ್ದಕ್ಕಾಗಿ ಅವರಿಗೆ ಕನ್ನಡ ಅಭ್ಯಾಸನಿಯಾಮಕ ಮಂಡಲದ ಪರವಾಗಿ ಕೃತಜ್ಞತೆಗಳನ್ನರ್ಪಿಸುತ್ತೇನೆ. ಕಾವ್ಯಮಂಜರಿಯ ಪ್ರಕಟನೆಯ ವಿಷಯದಲ್ಲಿ ವಿಶ್ವವಿದ್ಯಾಲಯದವರು ಆಸ್ಥೆವಹಿಸಿ ಎಲ್ಲ ಬಗೆಯ ಸಹಾಯ ಸಹಕಾರಗಳನ್ನು ನೀಡಿದುದಕ್ಕಾಗಿ ಅವರಿಗೆ ನಮ್ಮ ಧನ್ಯವಾದಗಳು. ಮುದ್ರಣ ಕಾರ್ಯವನ್ನು ಅಚ್ಚುಕಟ್ಟಾಗಿ ಮಾಡಿಕೊಟ್ಟ ಲಿಂಗರಾಜ ಆರ್ಟ್ಸ ಪ್ರೆಸ್ಸಿನ ಒಡೆಯರಿಗೆ ವಂದನೆಗಳು.

ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ.
ಅಗಸ್ಟ ೩, ೧೯೫೭.

ಸ. ಸ. ಮಾಳವಾಡ
ಅಧ್ಯಕ್ಷ
ಕನ್ನಡ ಅಭ್ಯಾಸ ಮಂಡಲ

# ದ್ವಿತೀಯ ಮುದ್ರಣ

ಮೊದಲನೆಯ ಮುದ್ರಣದ ಪ್ರತಿಗಳು ಮುಗಿದುಹೋದುದರಿಂದ ಅದನ್ನು ಯಾವ ಬದಲಾವಣೆಗಳೂ ಇಲ್ಲದೆ ಪುನರ್ಮುದ್ರಿಸಲಾಗಿದೆ. ಮುದ್ರಣ ಕಾರ್ಯವನ್ನು ಅಚ್ಚುಕಟ್ಟಾಗಿ ಮಾಡಿಕೊಟ್ಟ ಹುಬ್ಬಳ್ಳಿಯ ಆನಂದ ಪ್ರೆಸ್ಸಿನ ಒಡೆಯರಿಗೂ ಮೊದಲಚ್ಚಿನ ಓಲೆಗಳನ್ನು ಆಸ್ಥೆಯಿಂದ ತಿದ್ದಿದ ಪ್ರೊ. ಎಮ್. ಎಸ್. ಸುಂಕಾಪುರ ಅವರಿಗೂ ನಮ್ಮ ಕೃತಜ್ಞತೆಗಳು.

ಎಸ್. ಎಸ್. ಒಡೆಯರ

ರಜಿಸ್ಟ್ರಾರರು.

# ವಿಷಯಸೂಚಿಕೆ


| | | | ಪುಟ |
|---|---|---|---|
| | ಮುನ್ನುಡಿ | | ೩ |
| ೧. | ರನ್ನ : | ಸಂಜಯಸುಯೋಧನಸಂವಾದ | ೧ |
| ೨ | ನಾಗಚಂದ್ರ : | ಸೀತಾಸ್ವಯಂವರ | ೧೬ |
| ೩. | ಹರಿಹರದೇವ : | ಮಲುಹಣನ ರಗಳೆ | ೨೪ |
| ೪. | ರಾಘವಾಂಕ : | ಪುರದಪುಣ್ಯಂ ಪುರುಷ ರೂಪಿಂದೆ ಪೋಗುತಿದೆ ! | ೪೨ |
| ೫. | ಕುಮಾರವ್ಯಾಸ : | ಯಕ್ಷಪ್ರಶ್ನೆ | ೫೩ |
| ೬. | ಬಸವಪ್ಪಶಾಸ್ತ್ರಿಗಳು : | ಶ್ಲೋಕಚತುಷ್ಟಯ | ೬೭ |
| ೭. | ಶಾಂತಕವಿ : | ರಕ್ಷಿಸು ಕರ್ನಾಟಕದೇವಿ | ೬೮ |
| ೮. | ಪಂಜೆಮಂಗೇಶರಾಯರು: | ತೆಂಕಣಗಾಳಿಯಾಟ | ೬೯ |
| ೯ | ಮಧುರಚೆನ್ನ : | ನನ್ನನಲ್ಲ | ೭೨ |
| ೧೦. | ಜಾನಪದಕವಿ : | ಬಿಜ್ಜಮಹಾದೇವಿ | ೭೭ |
| ೧೧. | ಟಿಪ್ಪಣಿಗಳು | | ೮೪ |

# ಕಾವ್ಯಮಂಜರಿ—೨

## ಸಂಪುಟ—೨

## ೧

## ರನ್ನ

### ಸಂಜಯಸುಯೋಧನಸಂವಾದ

ಅನ್ನೆಗಮಿತ್ತ ಕುರುಕುಲಪಿತಾಮಹನುಂ ಆಹವಭೀಷ್ಮನು ಮೆನಿಸಿದ ಭೀಷ್ಮನ ಶರಶಯನದೊಳಂ ಬಿಲ್ಲಜಾಣಂ ದ್ರೋಣನಳಿವಿನೊಳಂ ತನ್ನ ಮೈದುನಂ ಜಯದ್ರಥನ ವಿಪತ್ತಿನೊಳಂ ತನ್ನಣುಗದಮ್ಮಂ ದುಶ್ಯಾಸನನ ಪಂಚತ್ವಪ್ರಪಂಚದೊಳಂ ತನ್ನಣುಗಾಳಪ್ಪ ಕರ್ಣನ ಸಾವಿನೊಳಂ ತನ್ನ ಮಾವನಪ್ಪ ಶಲ್ಯನ ಸಂಹರಣದೊಳಂ ಕುರುಕುಲಚೂಡಾಮಣಿಯುಂ ಪನ್ನಗಪತಾಕನುಂ ಕನಕಲತಾಲಾಂಛಿತೋತ್ತುಂಗಘನಗದಾಯುಧನುಂ ದಿವ್ಯಮುನಿವರಾಪರಾಧನುಂ ಸಕಲಲಕ್ಷ್ಮೀನಿವಾಸನುಂ ಸಮರಧೈರ್ಯನುಂ ಮಹಾಶೌರ್ಯನುಂ ರಾಧೇಯನಿಜಸಹಾಯನುಂ ಛಲದಂಕಮಲ್ಲನುಂ

ಸಕಲಭೋಗಲಕ್ಷ್ಮೀಪತಿಯುಂ ಅಭಿಮಾನಧನನುಮೆನಿಸಿದ ಸುಯೋಧನಂ ಚಿಂತಾಕ್ರಾಂತನಾಗಿ

ಅಸುಹೃತ್‌ಸೇನೆಗೆ ಸಾಲ್ವನೊರ್ವನೆ ಗಡಂ ರುದ್ರಾವತಾರಂ ಗಡಂ
ನೊಸಲೊಳ್ ಕಣ್‌ಗಡಮೆಂದು ನಚ್ಚಿ ಪೊರೆದೆಂ ತಾನಕ್ಕೆ ತಮ್ಮಮ್ಮನ-
ಕ್ಕಿಸಲಂಬಂ ತಿರುವಾಯ್ಗೆ ತಂದಱಿವರೇ ತಮ್ಮಿರ್ವರುಂ ಕಯ್ದುವಂ
ಬಿಸುಟರ್ ಜೋಳದ ಪಾೞಿಯಂ ಬಗೆದರಿಲ್ಲಾ ದ್ರೌಣಿಯುಂ
ದ್ರೋಣನುಂ ‖ ೧

ಪದುಳಂ ಕುಳ್ಳಿರ್ದೆಮಗಾ-
ಯದ ಮಾತಂ ತಗುಳೆ ಗೞಪಿ ಪೋದಂ ಸಂದಿ-
ರ್ದಪಟರೊಳಿಱಿದಱಿಯಂ ತ-
ಪ್ಪದೆ ಕಮ್ಮಱಿಯೋಜನೆನಿಸಿದಂ ಬಿಲ್ಲೋಜಂ ‖ ೨

ಈಯುಲಿಱಿಯಲ್ ಶರಣ್ಬುಗೆ
ಕಾಯಲ್ ಕ್ಷತ್ರಿಯರೆ ಬಲ್ಲರಾ ಬ್ರಹ್ಮಣ್ಯರ್
ಭೋ ಎನಲುಂ ಬಲ್ಲರ್ ಕೊಲೆ
ಘೋ ಎನಲುಂ ಬಲ್ಲರಿಱಿಯಲವರೆತ್ತಱಿವರ್ ‖ ೩

ಓಜಂ ಗಡ ಚಿಃ ಭಾರ-
ದ್ವಾಜಂ ಗಡಂ ಬಿಲ್ಲ ಬಲ್ಮೆಯುಂ ಕುಲಮುಂ ನಿ-
ರ್ವ್ಯಾಜಂ ಮಸುೞ್ದುವು ಪಾಂಡುತ-
ನೂಜರ ಪಕ್ಕದೊಳೆ ಪಾೞಿಗಿಡೆ ನೆಗೞ್ದುದಱಿಂ ‖ ೪

ತಪನಸುತಂ ಬೇಱಿಾಂ ಬೇ-
ಱಿ ಪೊಲ್ಲದಂ ನುಡಿದನಾವಗಂ ಬಿಸುಟಂ ರ-
ಕ್ಷಿಪ ಕೈದುವನೆಮಗಾ ಮಱಿ-
ಯ ಪಾಂಡವಂ ಬಗೆದು ನೋೞ್ಪೊಡಶ್ವತ್ಥಾಮಂ ‖ ೫

ಗೆಲಲಾರ್ಪೊಡಿಱಿದು ಗೆಲ್ವುದು
ಗೆಲಲಾಱದೊಡಣ್ಮಿ ಸಾವುದಾಳ್ಗಿನಿತೆ ಗುಣಂ
ಗೆಲಲುಂ ಸಾಯಲುಮಾಱದೆ
ತೊಲಗಿದೊಡೆ ನೆಗೞ್ತೆ ತೊಲಗದಿರ್ಕುಮೆ ಮೆಯ್ಯಂ ‖ ೬

ಕರವಾಳಂ ಮಸೆವಂತಿರೆ
ಮರವಾಳಂ ಮಸೆಯೆ ಕೂರಿತಕ್ಕುಮೆ ಕಲಿಯಂ
ಪೊರೆದೊಡೆ ಕೂರ್ಪಂ ತೋರ್ಪಂ-
ತಿರೆ ತೋರ್ಕುಮೆ ಪಂದೆ ಪೞಿಗೆ ಸಂಗರದೆಡೆಯೊಳ್ ‖ ೭

ತುಱುಗೋಳೊಳ್ ಪೆಣ್ಬುಯ್ಯಲೊ-
ಳೆಱೆವೆಸದೊಳ್ ನಂಟನೆಡಱೊಳೂರೞಿವಿನೊಳಂ
ತಱಿಸಂದು ಗಂಡುತನಮನೆ
ನೆಱಪದವಂ ಗಂಡನಲ್ಲನೆಂತುಂ ಷಂಡಂ ‖ ೮

ಎಂದರಸನವರ್ಗೆ ವಿರಸಮಾಗಿ ಪರುಷಂ ನುಡಿಯೆ ಸಂಜಯಂ ತನ್ನಂತರ್ಗತದೊಳ್

ಕಾರ್ಯಸಖಂ ಶಕುನಿ ಗಡಂ
ಶೌರ್ಯಸಖಂ ಸೂತಜಂ ಗಡಂ ಭೀಷ್ಮ ಶರಾ
ಚಾರ್ಯರ ನುಡಿ ಕೈಪೆ ಗಡಮ-
ವಾರ್ಯಂಗಹಿಕೇತನಂಗೆ ವಿಧಿವಿಳಸನದಿಂ ‖ ೯

ಗುರು ಕವಚಂ ಕರ್ಣಂ ಬಾ-
ಹುರಕ್ಕೆ ಸುರಸಿಂಧುನಂದನಂ ಸೀಸಕಮಾ-
ಗಿರೆ ಮೆಯ್ಗೆ ಮುಳಿಯಲಱಿಯದೆ
ಕುರುರಾಜನ ತೊಡೆಯನುಡಿವೆನೆಂದಂ ಭೀಮಂ ‖ ೧೦

ಎಂದು ಸಂಜಯಂ ಕುರುರಾಜನಂ ನೋಡಿ

ಭುವನಕ್ಕಾರಾಧ್ಯನೆಂಬೀ ನೆಗೞ್ದ ಬಿರುದಿನಂಕಕ್ಕೆ ತಕ್ಕಂದದಿಂ ಭಾ-
ರ್ಗವನೊಳ್ ದಿವ್ಯಾಸ್ತ್ರಮುಂ ಮುಂ ಪಡೆದು ನೆಗೞ್ದ ಶೌರ್ಯಕ್ಕೆ
ತಕ್ಕಂದದಿಂ ಪಾಂ-
ಡವರುಂ ಕೌರವ್ಯರುಂ ಕಯ್ಮುಗಿಯೆ ನೆಗೞ್ದ ಪೆಂಪಿಂಗೆ ತಕ್ಕಂದದಿಂ ಬಿ-
ಲ್ಲೊವಜಂ ಗಾಂಡೀವಿಯೊಳ್ ಕಾದಿದನವರ ಶರಾಸಂಖ್ಯೆಯುಂ
ನೀನೆ ಕಾಣಾ ‖ ೧೧

ಇದು ದಲ್ ಗಂಗಾತ್ಮಜನ್ಮಕ್ಕನುಗುಣಮಿದು ರಾಜಪ್ರಸಾದಕ್ಕೆ ಪ್ರೋತ-
ಕ್ಕುದಿದೀ ದೋರ್ದಂಡಕಂಡೂಯನಕೆ ಸದೃಶಮಾ ಕಲ್ತ ಬಿಲ್‌ಬಿನ್ನಣಕ್ಕಿಂ-
ತಿದೆ ಯುಕ್ತಂ ಭೀಷ್ಮನಾಮಕ್ಕಿದು ಸಮುಚಿತಮೆಂಬಂತೆ ಸಂಗ್ರಾಮರಂಗೋ-
ನ್ಮದಮತ್ತಂ ನೋಡೆ ಪಾರ್ಥಂ ಕದನದೊಳದಟಂ ತೋಱಿದಂ
ಸಿಂಧುಪುತ್ರಂ ‖ ೧೨

ಕಳಶನದೀಜರ್ ಭಕ್ತಿಗೆ
ಕಳಶಾರೋಹಣಮಿದೆನಿಸಿ ನೆಱಿಪಿದರವರೊಂ-
ದಳವಲ್ತು ಕಾದಿ ಗೆಲಲಾ-
ರಳವಲ್ತರ್ಜುನನ ಶೌರ್ಯಮಂ ನೀನಱಿಯಾ ‖ ೧೩

ನೃಪ ನಿನ್ನಂ ಪಿಡಿದುಯ್ಯೆ ಭಾನುಮತಿಯಂ ಸಂತೈಸಿ ಚಿತ್ರಾಂಗದಂ-
ಗುಪಯೋಗಾಸ್ತ್ರಮನೆಚ್ಚು ಕೂಡೆ ನಭದಿಂ ಗಾಂಡೀವಿ ತರ್ಪಾಗಳೀ
ಕೃಪನೀ ಸೈಂಧವನೀ ಸರಿತ್ತನಯನೀ ರಾಧೇಯನೀ ಮದ್ರಭೂ-
ಮಿಪನೀ ಕುಂಭಜನೀ ಕುರುಪ್ರವರರಂದೇಂ ಹಮ್ಮದಂಬೋದರೇ ೧೪

ಕಲಿ ಪನ್ನೊಂದಕ್ಷೋಹಿಣಿ
ಬಲಮೆಲ್ಲಮನೊಂದೆ ರಥದೊಳೋರ್ವನೆ ಗೆಲ್ದಂ
ಗೆಲಲಱಿಯಂ ಗೋಗ್ರಹಣದ
ಕಲಹದೊಳೇಕಾಂಗವಿಜಯನಾದಂ ವಿಜಯಂ ॥ ೧೫

ಉರಿ ಕೊಳೆ ಕೋಟಿಮೃಗಂ ಕೊಳೆ ವಿಷಾಹಿಕುಳಂ ಕೊಳೆ ಶತ್ರುಭೂಮಿಯೊಳ್
ಗಿರಿಗಹನಂಗಳೊಳ್ ವಿಷಮರಾಕ್ಷಸಸಂಕುಳದೊಳ್ ವರಾಹಸಿಂ-
ಧುರಖುರಶಯ್ಯೆಯೊಳ್ ವಿಪುಳ ಭೀಕರದೊಳ್ ನಿಜ ಬಾಹುವ-
ಜ್ರಪಂಜರದೊಳಗಿಟ್ಟು ರಕ್ಷಿಸಿದನಲ್ತೆ ಸಹೋದರರಂ ವೃಕೋದರಂ ॥ ೧೬

ಬಕನಂ ಹಿಡಿಂಬನಂ ಕೀ-
ಚಕನಂ ಕಿಮ್ಮೀರನಂ ಜಟಾಸುರನಂ ಕೊಂ-
ದ ಕಲಿ ಜರಾಸಂಧನನಿ-
ಕ್ಕಿ ಕೊಂದ ಬಲ್ಲಾಳ್ ಮರುತ್ಸುತಂ ಕೇವಳನೇ ॥ ೧೭

ಎಂದು ಸಂಜಯಂ ಸಾಹಸಭೀಮನ ಸಾಹಸಂಗಳನಭಿವರ್ಣಿಸಿ

ನೆಗಳ್ದ ಭಾರತಮಲ್ಲ ಶಂತನುಜಬಾಣಘಾತದಿಂ ಭೀಮಭೀ-
ಮ ಗದಾದಂಡವಿಘಾತದಿಂ ಕುರುನೃಪಾನೀಕಂ ಪಡಲ್ವಟ್ಟು ಜೇ-
ರಗೆಯೊಕ್ಕಲ್ಗೆಣೆಯಾಗಿ ಬಿಳ್ದ ಭಟರಿಂ ಬಿಳ್ದಶ್ವದಿಂ ಬಿಳ್ದ ದಂ-
ತಿಗಳಿಂದಂ ಜವನುಂಡು ಕಾಱದವೊಲಾಯ್ತೆತ್ತಂ ಕುರುಕ್ಷೇತ್ರದೊಳ್ ॥ ೧೮

ಪವನಸುತಂ ಗದೆಗೊಳೆ ಗಾಂ-
ಡಿವಿ ಬಿಲ್ಗೊಳೆ ಕಯ್ದುಗೊಳ್ವ ಮಾರ್ಕೊಳ್ವಭಟರ್
ಭುವನದೊಳಿಲ್ಲವರ್ಗಳ ಬಾ-
ಹುವಿಕ್ರಮಂ ನಿನಗೆ ಪೊಸತೆ ಕೌರವರಾಜಾ ॥ ೧೯

ಜವನ ಮುಳಿಸವನ ಮುಳಿಸೆನೆ
ಜವನೇ ಬರ್ಪವೊಲಿಂತು ಕುಱಿದಱಿದಱಿದಂ
ಜವನಂ ಮುಳಿಯಿಸಿ ಸುಭಟರ
ಜವನಂ ಮುಳಿಯಿಸಿ ಬರ್ದುಂಕುವನ್ನರುಮೊಳರೇ || ೨೦

ದಾನಂ ಪ್ರಿಯವಾಕ್ ಸಹಿತಂ
ಜ್ಞಾನಮಗರ್ವಂ ಕ್ಷಮಾನ್ವಿತಂ ಶೌರ್ಯಮೆನಿ-
ಪ್ಪೀ ನುಡಿಯನೆ ನುಡಿಯಿಸಿದುದು
ದಾನಂ ಜ್ಞಾನಂ ಕ್ಷಮಾಗುಣಂ ಧರ್ಮಜನಾ || ೨೧

ಆಮುಳ್ಗಳ್ ವಿನಯದ ವಿಕ್ರಮ-
ದಮುಳ್ಗಳವರ್ ಮುಳಿಯೆ ಗಂಡರಿಲ್ಲವರ ಪರಾ-
ಕ್ರಮಮಂ ನೀನಱಿದಿರ್ದುಂ
ಸಮರದೊಳಿಳಿಸುವುದೆ ಕುರುಕುಲಾಂಬರಭಾನು || ೨೨

ಎಂದು ನುಡಿದ ಸಂಜಯನ ನುಡಿಗೆ ಫಣಿರಾಜಕೇತನಂ ಸಿಡಿಲ್ದು

ಸ್ಥಿರಸತ್ಯವ್ರತಿಯೆಂದು ಧರ್ಮರುಚಿಯೆಂದಾ ಧರ್ಮಪುತ್ರಂ ದಯಾ-
ಪರನೆಂದೆಲ್ಲರ ಪೇೞ್ದ ಮಾತು ಪುಸಿಯಾಯ್ತೀ ಕಾರ್ಮುಕಾಚಾರ್ಯನಂ
ಗುರುವಂ ಬ್ರಾಹ್ಮಣನಂ ತೊದಳ್ನುಡಿದು ಕೊಂದಾಗಳ್ ಮೃಷಾಪಾತಕಂ
ಪರಪೊಂಬೀ ನುಡಿಯಿಂ ಪೃಥಾಪ್ರಿಯಸುತಂ ಪಾಪಕ್ಕೆ ಹಕ್ಕಾಗನೇ || ೨೩

ಈ ದೊರೆಯುಱಿಮಗನುಂ ಮೃಷ
ವಾದಂ ನೋಡೆಂದು ಧರ್ಮನಂ ಮೂದಲಿಸಲ್
ಪೋದಂ ಪುತ್ರನನಱಿಸಲ್
ಪೋದನೆ ಯಮಪುರಕೆ ಮುಕ್ತಬಾಣಂ ದ್ರೋಣಂ || ೨೪

ವನಿತೆಯ ಕೇಶಮಂ ಸಭೆಯೊಳೆನ್ನನುಜಂ ತೆಗೆವಲ್ಲಿ ಗಂಡನಾ-
ಗನೆ ಭಗದತ್ತನಾನೆ ಬರಿಯೆಲ್ವುಡಿವನ್ನೆಗವೊತ್ತೆ ಗಂಡನಾ-
ಗನೆ ಕೊಲಲೊಲ್ಲದಂಗಪತಿ ಬಿಲ್ಲೊಳೆ ಕೋದೆಳೆವಲ್ಲಿ ಗಂಡನಾ
ಗನೆ ಕುರುಬಾಲಸಂಹರಣಮಾತ್ರದೆ ಮಾರುತಿ ಗಂಡನಾದನೇ ‖ ೨೫

ಒಡವುಟ್ಟಿದರಂ ಕೊಂದವ-
ರಡಗಂ ತಿಂದವರ ನೆತ್ತರಂ ಬೆಲಗಸೆಯೊಳ್
ಕುಡಿವೀ ನಿಸ್ತ್ರಿಂಶತೆಯಂ
ಹಿಡಿಂಬೆಯಂ ಪೊರ್ದಿ ಕಲ್ತನಾಗನೆ ಭೀಮಂ ‖ ೨೬

ಎನಗಾ ಜೂದಿನೊಳಗ್ರಜಾನುಜಸಮೇತಂ ಗಂಡುದೊಟ್ಟಾಗಿ ಕಾ-
ನನದೊಳ್ ವಲ್ಕಲಧಾರಿಯಾಗಿ ಹರನೊಳ್ ದಿವ್ಯಾಸ್ತ್ರಮಂ ಬೇಡೆ ಜೆ-
ಕ್ಕನದಿಂ ತಾಪಸನಾಗಿ ಪೇಡಿಯನೆ ಮತ್ಸ್ಯಾವಾಸದೊಳ್ ವಾಸುದೇ-
ವನ ನಂಟಂ ನಟನಾಗಿ ಬಾರದ ಭವಂ ಬಂದಂ ಪೃಥಾನಂದನಂ ‖ ೨೭

ಗುರುವಂ ಪ್ರೋಜ್ಝಿತಚಾಪನಂ ಪುಸಿದು ಕೊಂದಾ ಬೀರಮಂ ಭೀಷ್ಮರಂ
ಶರಶಯ್ಯಾಗತರಂ ಕಱುತ್ತು ಗುಱೆಯೆಚ್ಚಾ ಪೊಚ್ಚಱಂ ಕರ್ಣನಂ
ವಿರಥಜ್ಯಾಯುಧನೆನ್ನದೆಚ್ಚು ತಲೆಗೊಂಡಾ ಶೌರ್ಯಮಂ ಪಾಂಡುಪು-
ತ್ರರೆ ಬಲ್ಲರ್ ಮೆಱೆಯಲ್ಕೆ ಸಾಹಸಧನಂ ದುರ್ಯೋಧನಂ ಬಲ್ಲನೇ ‖ ೨೮

ಸೊಕಮಿರ್ಕಕ್ಕಟ ದರ್ಭಪಾಣಿ ಯಮಜಂ ದರ್ವೀಕರಂ ವಾಯುಪು-
ತ್ರಕನುಂ ಜರ್ಜರಹಸ್ತನಿಂದ್ರತನಯಂ ದಸ್ರಾತ್ಮಜರ್ ದಂಡಮು-
ಷ್ಟಿಕರರ್ ಶಸ್ತ್ರವಿಡಂಬಮೇವುದವರ್ಗಂ ಪಾಂಚಾಳಿಯುಂ ಗಂಧದಾ-
ಯಕಿಯಾಗಿರ್ಪಿನಮಂದು ಮತ್ಸ್ಯಗೃಹದಿಂದೀ ನಿಸ್ಪ್ರಹಂ ಪೊಲ್ಲದೇ ‖ ೨೯

ಸಭೆಯೊಳ್ ತನ್ನ ಮಯ ಪಕ್ಕದೆನ್ನನುಜಸಾ ಪಾಂಚಾಲಿಯಂ ಪಂಚವ-
ಲ್ಲಭೆಯಂ ಮೋದೆಯುಮಲ್ಲಿ ವಿಳ್ಮಳನೆ ನೋಡುತ್ತಿರ್ದ ಬಲ್ಲಾಳ್ಗಳಿ-
ಲ್ಲಿ ಭರಂಗೆಯ್ದಪರೀ ಪರಾಕ್ರಮಮುಮೀ ಪೆರ್ಮಾತುಮೀ ಗಂಡುಮೀ-
ಸುಭಟಾಲಾಪಮುಮೆಲ್ಲಮಾ ನೃಪಸುತರ್ಗಂದೆಲ್ಲಿ ಪೊಕ್ಕಿರ್ದುದೋ ॥ ೩೦

ಎಂದು ಧೃತರಾಷ್ಟ್ರನಂದನಂ ಧರ್ಮನಂದನನುಮಂ ವಾಯುನಂದ-
ನನುಮಂ ಸಂಕ್ರಂದನನಂದನನುಮಂ ಅಶ್ವಿನೀನಂದನನುಮಂ ನಿರಾಕರಣಂ-
ಗೆಯ್ದನಿತರೊಳಂ ಮಾಣದೆ

ಪವನಂಗೆ ಪುಟ್ಟಿದಂ ರಾ-
ಘವನಣುಗಾಳ್ ತ್ರಿಣಯನಾಂಶಮೆನಿಪಣುಮಂ ಪಾಂ-
ಡವಕೇತುದಂಡದೊಳ್ ನೆಲ-
ಸುವುದಾವಗ್ಗಳಿಕೆ ಕಪಿಗೆ ಚಪಲತೆ ಸಹಜಂ ॥ ೩೧

ಅನುಜೆಯನಿತ್ತು ನರಂಗಾ-
ತನ ತನಯಂಗಿತ್ತು ತನ್ನ ಮಗಳಂ ತಾನಾ-
ತನ ರಥಮನೆಸಗಿ ಧರ್ಮಜ-
ನನುಜನ ನೆವದಿಂದಮುರಸುಗೆಯ್ವಂ ಕೃಷ್ಣಂ ॥ ೩೨

ಪುರುಷರ್ ಮೂವರೊಳೊರ್ಬನೆಂಬರಸುರಪ್ರಧ್ವಂಸಿಯೆಂಬರ್ ಜಗ-
ದ್ಗುರುವೆಂಬರ್ ಪೆಱರ್ಗೇಕೆ ತೇರನೆಸಪಂ ಧರ್ಮಾನುಜಂಗೇಕೆ ಕಿಂ-
ಕರನಾದಂ ಕರವೇೞಯಾದನದಱಂ ಸೂತಂ ಭಟಂ ಪೇೞಯೆಂ-
ಬರ ಮಾತೊಪ್ಪುಗುಮಾದಿದೇವನೆನಿಸಲ್ ಕೃಷ್ಣಂಗದೆಂತೊಪ್ಪುಗುಂ ॥ ೩೩

ಅನಿಮೇಷಾದ್ಯವತಾರಂ
ತನಗಾಯ್ತು ದಶಾವತಾರಮನಿತಱೊಳಿರದ-
ರ್ಜುನನ ರಥಮೆಸಪ ಪನ್ನೊಂ-
ದನೆಯಂದು ಸೂತಾವತಾರನುಂ ಹರಿಗಾಯ್ತೇ ॥ ೩೪

ಎಂದು ದುರ್ಯೋಧನಂ ಕಪಿರಾಜನುಮಂ ಕಂಜೋದರನುಮಂ ನಿರಾಕರಣಂಗೆಯ್ದು ಅನಿತಱೊಳಂ ಮಾಣ್ದು ಸೈರಿಸಲಾಱದೆ ಸಮರೋದ್ಯೋಗಂಗೆಯ್ಯೆ ಸಂಜಯನಂಜದೆ ಮಾರ್ಕೊಂಡು

ಪ್ರತಿಕೂಲದೈವನಯ್ ನೀಂ
ಪ್ರತಿನೃಪರನುಕೂಲದೈವರಸಹಾಯನೆ ನೀಂ
ಪ್ರತಿನೃಪರಸಹಾಯಜಿತ-
ಪ್ರತಿಬಲರದಱಿಂದನರ್ಥಕಂ ವಾಕ್ಯಾರ್ಥಂ ॥ ೩೫

ಎಂದು ನುಡಿದ ಸಂಜಯನ ನುಡಿಗೆ ದುರ್ಯೋಧನಂ ನಿರ್ವೈಸಿ

ಸಮರಜಯಂ ದೈವಾಯ-
ತ್ತಮದಱಿನಾ ಪುರುಷಕಾರಮೆಮಗಾಯ್ತಿಗಳ್
ಯಮನಂದನಾದಿಗಳೊಳೊಂ-
ದೆ ಮೆಯ್ಯೊಳಾಂತಿಱಿವೆನೆನ್ನ ಛಲಮಂ ಮೆಱೆವೆಂ ॥ ೩೬

ಸುರಸಿಂಧೂದ್ಭವಕುಂಭಜನ್ಮದಿನಕೃತ್‌ಪುತ್ರಾದಿಗಳ್ ಸಾಯೆ ಸಂ-
ಗರದೊಳ್ ಪಾಂಡವರಂ ಗೆಲಲ್ ನೆಱೆಯನಿನ್ನೇಕಾಕಿ ದುರ್ಯೋಧನಂ
ನೆರಗಂ ಪಾರ್ದಪನೆಂಗುಮೀ ಧರೆ ಭುಜಾದಂಡಂ ಗದಾದಂಡಮೆಂ-
ಬೆರಡುಂ ಸಂಜಯ ಮಜ್ಜಯಕ್ಕೆ ನೆರವಿಂ ಮತ್ತನ್ಯರಂ ಪಾರ್ವೆನೇ ॥ ೩೭

ಮದವತ್‌ಕರಿಗಳ ಬಿದುವಂ
ವಿದಾರಣಂಗೆಯ್ದು ಕೊಲ್ವ ಕಂಠೀರವಕಂ
ಕದನದೊಳರಿನೃಪರಂ ಕೋ-
ಪದೆ ಕೊಲ್ವೆನಗಂ ಸಹಾಯರೆಂಬರುಮೊಳರೇ ॥ ೩೮

ಎಂದು ನುಡಿದು ಕಾಲದಂಡಪ್ರಚಂಡಮಪ್ಪ ತನ್ನ ಗದಾದಂಡಮಂ ಭುಜಾದಂಡದೊಳಳವಡಿಸಿಕೊಂಡು ಸಮರಾಭಿಮುಖನಾಗಿ ನಡೆವ ಫಣಿ-ರಾಜಕೇತನನಂ ಸಂಜಯನಂಜದೆ ಮಾರ್ಕೊಂಡು

ಪವನಾತ್ಮಜಂ ಮಹಾರಥ-
ನವನಿಪ ಸಮರಥನೆ ನೀನದರ್ಕಧಿಕನೊಳಾ
ಪವನಾತ್ಮಜನೊಳ್ ಮಱೆ ಬ-
ದ್ಧವೈರಮಂ ಸಂಧಿಮಾಳ್ಪುದುತ್ತಮ ಪಕ್ಷಂ ॥ ೩೯

ಎಂದು ನುಡಿದ ಸಂಜಯನ ನುಡಿಗೆ ಪಿಂಗಾಕ್ಷನತಿ ವಿಷಮಪರುಷ-ವೇಷಾವೇಶಧರನಾಗಿ

ಅತಿರಥನಾತಂ ಗಡ ಬಲ-
ಯುತನಾಂ ಸಮರಥನೆನಧಿಕ ಬಲವಂತಂ ಮಾ-
ರುತಿ ಗಡ ಮಹಾರಥಂ ಮಾ-
ರುತಿಯುಂ ತದ್ರಥದ ಗಾಲಿಗಳ್ ದೊಡ್ಡಿದುವೇ ॥ ೪೦

ಪೆಱರಂ ಪೊಗಳ್ವಿಪೆಯೆಮ್ಮಂ
ಕಿಱಿಯಂ ಮಾಡಿದಪೆ ಎಲವೊ ಸಂಜಯ ನೀನುಂ
ಪೆಱನೊರ್ವಂ ಬಿಲ್ಲೋಜಂ
ಪೆಱನೊರ್ವಂ ಸಿಂಧುಪುತ್ರನಾಗಲ್ ಬಗೆವೋ ॥ ೪೧

ಎಂದರಸನವಂಗೆ ವಿರಸಮಾಗಿ ಪರುಷಮಂ ನುಡಿಯೆ ಸಂಜಯನಂಜಿ

ಎನಿತೆನಿತಂ ಕಲಿಸಿದೊಡಂ-
ತನಿತನಿತು ನಿಜಸ್ವಭಾವಮುಕ್ಕುಂ ನೃಪನಂ-
ದನನಂತುಮಂತು ಕರ್ಕಶ-
ತನುವಂತಃಶೂನ್ಯಮುಕ್ಕುಮುನ್ನತವಂಶಂ ॥ ೪೨

ಎಂದಱಿದು ‘ ಮೌನಂ ಸರ್ವಾರ್ಥಸಾಧನಂ ’ ಎಂಬುದು ಈತಂಗೆ ಅನುಕೂಲವೃತ್ತಿಯುಂ ಸ್ವಚ್ಛಂದಾನುವೃತ್ತಿಯುಮಾಗಿ ನೆಗೞ್ದುದು ಎಂತುಂ ‘ ಆರಾಧ್ಯಂ ನ ಪ್ರಕೋಪಯೇತ್ ’ ಎಂದು ಮೋನಂಗೊಂಡು ಸಂಜಯಂ ಕಿಱಿದು ಬೇಗಮಿರ್ದು ಫಣಿರಾಜಕೇತನಂ ಯುದ್ಧಸನ್ನದ್ಧನಾಗಿ ನಡೆವುದಂ ಕಂಡು ಮತ್ತಮಾ ಸಂಜಯಂ ನಿಸರ್ಗಮೂರ್ಖನುಂ ಸ್ವಭಾವದೃಢನುಂ ಸ್ವಾಮಿಹಿತವನುಂ ಅಪ್ಪುದರಿಂದಿರಲಾರದೆ

ಬಲದೊಳಗಶ್ವತ್ಥಾಮಂ
ಬಲನೊಳನಿರ್ವರುಮನಾಸೆಗೆಯ್ಯದೆ ವಿದ್ಯಾ-
ಬಲದಿಂ ಕಾದದೆ ನಿಜಭುಜ-
ಬಲದಿಂ ಪಾಂಡವರೊಳರಸ ಕಾದಲ್ ಬಗೆವಯ್ ‖ ೪೩

ಆ ಬಲದೇವಾಶ್ವತ್ಥಾಮರುಮಿರ್ದರ್ ಅವರಿರ್ವರುಮಲ್ಲದೆ ಕೃಪ ಕೃತವರ್ಮರುಮಿರ್ದರ್ ಅಂತು ನಾಲ್ವರೊಳೊರ್ಬಂಗೆ ವೀರಪಟ್ಟಮಂ ಕಟ್ಟಿ ವೀರಪ್ರಮುಖಂಗೆ ಸೇನಾಧಿಪತ್ಯಾಭಿಷೇಕಮಂ ಮಾಡಿ ಪಗೆಯಂ ಕಯ್ಗೆ ಮಾೞ್ಪುದು ಎಂಬುದುಂ ಸಂಜಯನ ನುಡಿಗೆ ದುರ್ಯೋಧನ-ನಿಂತೆಂದಂ

ತ್ರಿದಶನದೀಸುತನಿಂ ತೀ-
ರದ ಕಜ್ಜಂ ಮುನ್ನ ಕಳಶಸಂಭವನಿಂ ತೀ
ರದ ಕಜ್ಜಮಿನಜನಿಂ ತೀ-
ರದ ಕಜ್ಜಂ ದ್ರೋಣಪುತ್ರನಿಂ ತೀರ್ದಪುದೇ ‖ ೪೪

ದ್ರೋಣನೆಮಗೊಳ್ಳಿಕೆಯ್ದಂ
ದ್ರೋಣನ ಸುತನೊಳ್ಳಿಕೆಯ್ಯದಿರ್ಕುಮೆ ಸಮರ-
ಕ್ಷೋಣಿಯೊಳಿನ್ನವನಾಸೆಯೆ
ಮಾಣೆಯಣಂ ಕಯ್ಪೆ ಸೊರೆಯ ಕುಡಿಯೇಂ ಮಿಡಿಯೇಂ ‖ ೪೫

ಹಲಿಯುಂ ರಣಕೇಳಿಕುತೂ-
ಹಲಿಯುಂ ನಚ್ಚಿರ್ದೆನವನುಮಾಹವಕೋಲಾ-
ಹಲದಲ್ಲಿ ತೀರ್ಥಯಾತ್ರಾ-
ಚ್ಛಲದಿಂದಮಗಲ್ದು ಪೋದನಿನ್ನುಂ ಬಾರಂ || ೪೬

ಮಡಿವೊಡೆ ಪಗೆ ರವಿಸುತನಿಂ
ಮಡಿಗುಂ ಮೇಣ್ ಶೌರ್ಯಶಾಳಿ ದುಶ್ಶಾಸನನಿಂ
ಮಡಿಗುಂ ಮೇಣೆನ್ನಿಂದಂ
ಮಡಿಗುಂ ಪೆಱಪೆಱರಿನೆನ್ನ ಪಗೆ ಮಡಿದಪುದೇ || ೪೭

ಕಾನೀನಂ ದ್ರೋಣನದೀ
ಸೂನುಗಳೞಿದಿಂ ಬೞಿಕ್ಕೆ ಪೆಱತೆನಗಿಲ್ಲಂ-
ದಾನೆ ಗಳಿತಾಶ್ರುಜಲದಿಂ
ಸೇನಾಪತ್ಯಾಭಿಷೇಕಮಂ ಮಾಡಿದಪೆಂ || ೪೮

ಎನಗಿರ್ವರುಮೆರಡುಂ ತೋ-
ಳೆನಗಿರ್ವರುಮೆರಡು ಕಣ್ಗಳೆನ್ನರೆ ಯುವರಾ-
ಜನುಮಂಗರಾಜನುಂ ಪೋ-
ರೆನೆ ಸಂಜಯ ಮತ್ತಮೆನಗೆ ಮಾನಸವಾೞ್ಕೆ || ೪೯

ಕೞಿದಂ ದಿನಕರತನಯಂ
ಕೞಿದಂ ಯುವರಾಜನಪ್ಪ ದುಶ್ಶಾಸನನುಂ
ತುೞಿಲಾಳ್ಗಳಿರ್ವರುಮಂ
ಕೞಿಪಿ ಸುಯೋಧನನ ಬಾೞ್ವುದಂ ನಂಬಿದಿರೇ || ೫೦

ಎನಗೆ ಮನಮಿಂದು ಶೂನ್ಯಂ
ಮನೆ ಶೂನ್ಯಂ ಬೀಡು ಶೂನ್ಯಮಾದುದು ಸಕಲಾ-
ವನಿ ಶೂನ್ಯಮಾಯ್ತು ದುಶ್ಶಾ-
ಸನನಿಲ್ಲದೆ ಕರ್ಣನಿಲ್ಲದಾನೆಂತಿರ್ಪೆಂ ॥ ೫೧

ಬಾಂಧವರನಿಱಿಸಿ ಸರಸಿಜ-
ಬಾಂಧವತನಯನುಮನೆನ್ನ ತಮ್ಮನುಮಂ ನ-
ಮ್ಮಂಧನರೇಂದ್ರನ ಮೊಗಮಂ
ಗಾಂಧಾರಿಯ ಮೊಗಮನಾವ ಮೊಗದೊಳೆ ನೋೞ್ಪೆಂ ॥ ೫೨

ಎನೆ ಸಂಜಯನಾ ಪ್ರಸ್ತಾವದೊಳ್ ಭೀಷ್ಮದ್ರೋಣಕರ್ಣದುಶ್ಶಾಸನಶಲ್ಯಶಕುನಿಸೈಂಧವಭೂರಿಶ್ರವಸೋಮದತ್ತಭಗದತ್ತಸೌಬಲಬೃಹದ್ಬಲ—ಬಾಹ್ಲೀಕವಿಂದಾನುವಿಂದಾದಿಗಳ ಸಾವಿನೊಳ್ ಸರ್ವಾಂಗವಿಕಳರಾಗಿರ್ದ ಧೃತರಾಷ್ಟ್ರ ಗಾಂಧಾರಿಯರ ಚರಣಾರವಿಂದವಂದನಂಗೆಯ್ದು ದೇವರ ಮನಃಕ್ಷತಮನಾಱಿಸಲ್ವೇೞ್ಪುದು ಬೀಡಿಂಗೆ ಬಿಜಯಂಗೆಯ್ವುದೆನೆ

ಸವಳದೆ ಗುರುಜನದಲ್ಲಿಗೆ
ಯುವರಾಜನುಮಂಗರಾಜನುಂ ಬೆರಸು ರಣೋ-
ತ್ಸವದಿಂ ಪೋದೆಂ ನಾಣ್ಚುವೆ
ನವರಿರ್ವರುಮಿಲ್ಲದೀಗಳಲ್ಲಿಗೆ ಪೋಗಲ್ ॥ ೫೩

ಪತಿಶೋಕವಿಕಳ ಪಾರ್ಥಿವ-
ನಿತಂಬಿನೀಜನಮನೀಕ್ಷಿಸಲ್ ಸಂಜಯ ಲ-
ಜ್ಜಿತನೆನ್ನಿರ್ಪಿರವಿಂದೇ-
ಕೆ ತೋರ್ಪೆನಾನೆನ್ನ ಮೊಗಮನತಿ ದುಃಖಿತನೆಂ ॥ ೫೪

ಎಂಬನ್ನೆಗಂ ಸಕಲ ಚತುರಂಗಬಲವಿಕಳನಾಗಿ ಸಪ್ತಾಂಗರಾಜ್ಯ-ಸಘಾಲಿಂಗಿತನಾಗಿ ಸಂಗ್ರಾಮರಂಗದೊಳಿರ್ದನೆಂಬುದಂ ಆಪ್ತಚರರಱಿಪೆ ಕೇಳ್ದು ಗಾಂಧಾರಿಯುಂ ಧೃತರಾಷ್ಟ್ರನುಂ ಶೋಕಾಕುಲೀಕೃತಚಿತ್ತರಾಗಿ ತಮ್ಮ ಮಗನನಾರಯ್ಯಲುಂ ಮನಃಕ್ಷತಮನಾಱಿಸಲುಮೆಂದು ಅಱಿಸುತ್ತುಂ ಬಂದು

ಪಡೆ ಪನ್ನೊಂದಕ್ಷೋಹಿಣಿ-
ಗೊಡೆಯನೆ ಮೂರ್ಧಾಭಿಷಿಕ್ತನಯ್ ಮೂಱುಂ ಬೆ-
ಳ್ಗೊಡೆಯ ನಡುವಿರ್ಪ ನೀನಿ-
ರ್ದೆಡೆಯುಮನೆಮಗಱಿಯದಂತುಟಾದುದೆ ಮಗನೇ ॥ ೫೫

ಎಂದು ಪೞಯಿಸುತ್ತುಂ ಬರ್ಪ ಗುರುಜನದ ಸರಮಂ ಸಂಜಯ-ನಱಿದು ಕರಕಮಲಮುಕುಳಿತಾಂಜಲಿಯಾಗಿ ದೇವಾ ನಿನ್ನಲ್ಲಿಗೆ ನಿಜ ಜನನೀ ಜನಕರ್ **ಅೞಸುತ್ತುಂ** ಬಂದರ್ ಎಂಬುದುಂ ಉದ್ಧೃತಗೋತ್ರಾಭಿಮುಖಂ ವಜ್ರಾಘಾತಮಾದಂತೆ ಸಿಗ್ಗಾಗಿ ತಲೆಯಂ ಬಾಗಿ

ಅರಿಭೂಪಾಲರನಿಕ್ಕಿ ಗೆಲ್ದೊಸಗೆಯಿಂ ತೂರ್ಯಸ್ವನಂ ಪೊಣ್ಮೆ ಸೋ-
ದರರುಂ ಮಕ್ಕಳುಮಾಪ್ತರುಂ ಬೆರಸು ಬಂದಾನಂದದಿಂ ಕಾಣ್ಬೆನೆಂ-
ದಿರಲಿಂತಾಯ್ತು ವಿಧಾತ್ರ ಮದ್ಗುರುಗಳಂ ದುಃಖಾತ್ಮರಂ ಶೋಕತ-
ತ್ಪರರಂ ಮೆಯ್ಯೊಳೆ ಬೀೞುವಶ್ರುಮುಖರಂ ಕಾಣ್ಬಂತುಟಂ
ಮಾಡಿದಯ್ ॥ ೫೬

ಕಂದ ನಿಜಾನುಜರೆಲ್ಲಿದ-
ರೆಂದೆನ್ನಂ ಜನನಿ ಬಂದು ಬೆಸಗೊಂಡೊಡದೇ-
ನೆಂದು ಮಱುಮಾತುಗುಡುವೆಂ
ಕೊಂದರ್ ಕೌಂತೇಯರೆಂದು ಬಿನ್ನೈಸುವೆನೋ ॥ ೫೭

ಶೋಕಂ ಮಿಗೆ ಫಣಿರಾಜಪ-
ತಾಕಂ ವಿಗಳಿತವಿವೇಕನವಿರಳಬಾಷ್ಪೋ-
ದ್ರೇಕಂ ಹಾ ದುಶ್ಶಾಸನ
ಹಾ ಕರ್ಣಾ ಎನುತುಮಂತೆ ಮೂರ್ಛೆಗೆ ಸಂದಂ || ೫೮

೨

# ನಾಗಚಂದ್ರ

## ಸೀತಾಸ್ವಯಂವರ

ಆಗಳಾ ಪುರೋಹಿತಾದೇಶದಿನನೇಕಮಂಗಳಾನಕಸಿನದಮೊಡನೆ ರಥಮನೇಱಿ

ರಮಣಿಯರಿರೆಡುಂ ಕೆಲದೊಳ್
ಚಮರರುಹಮನಿಕ್ಕೆ ಬೀಱೆ ಬೆಳ್ಗೊಡೆ ಬೇಱೊಂ-
ದಮೃತಾಂಶುವನಾ ಕ್ಷಣದೊಳ್
ಹಿಮಾಂಶುಮುಖಿ ಮಱೆದಳೀಕ್ಷಣಾಕರ್ಷಣಮಂ ‖ ೧

ಆಗಳಾ ಸ್ಯಂದನಮಂ ಸುತ್ತಿಮುತ್ತಿ ಕುಂಚದಡಪದ ಡವಕೆಯು ಕನ್ನಡಿಯ ಪರಿಚಾರಿಕೆಯರುಮೊಡನಾಡಿಗಳಪ್ಪಯ್ನೂರ್ವರ್ ಕನ್ನೆಯರುಂ ಮಂಗಳೋಪಕರಣದ್ರವ್ಯಂಗಳಂ ಪಿಡಿದು ನಡೆಯೆ

ಮದನಪತಾಕೆ ಚುಂಬಿಸೆ ವಿಯನ್ಮುಖಮಂ ಸ್ಮರಚಾಪಟಂಕೃತಂ
ಪುದಿಯೆ ದಿಗಂತಮಂ ಕುಸುಮಸಾಯಕಸಾಯಕಮುರ್ಚೆ ರಾಜಲೋ-
ಕದ ಮನಮಂ ಮನೋಜವಿಜಯಾಂಗನೆ ಜಾನಕಿ ಪೊಕ್ಕಳಾ ಸಭಾ-
ಸದನ ಸುವರ್ಣಗೋಪುರಮನೇಱಿ ಹಿರಣ್ಮಯಮಂ ವರೂಥಮಂ ‖ ೨

ಕನ್ನೆಯುರಖಿಲ ಕಲಾಸಂ-
ಪನ್ನೆಯುರಯ್ನೂರ್ವರಲರ್ದ ತಾವರೆಗಳವೋಲ್
ತನ್ನೊಡವರೆ ಬಂದಳ್ ಸಿರಿ-
ಸನ್ನಿದಮಾದಂತೆ ಸೀತೆ ಕನ್ಯಾರತ್ನಂ ||

ಅನಿಶಿಂದ್ರಿಯುಮುಂ ವಿಷಯುಮ-
ನನಾಕುಲಂ ಬಿಟ್ಟು ದರ್ಶನೇಂದ್ರಿಯವೊಂದ-
ರ್ಕನುವಶಮಾದುವೆನಲ್ ನೃಪ
ತನಯುರ್ ಜಾನಕಿಯ ಮೇಲೆ ಕಣ್ಣಾಗಿರ್ದರ್ || ೪

ಕರಣಂ ನಯನಮೆ ವಿಷಯುಂ
ತರುಣಿಯೆ ಪೆಱತೇನುಮಿಲ್ಲೆನಲ್ ರಾಜತನೂ-
ಜರ ಕಣ್ಗಳೆಳಸಿ ಬಳಸಿದು-
ವುರವಣಿಸಿದುವಟ್ಟಿಮುಟ್ಟಿದುವು ಜಾನಕಿಯುಂ || ೫

ಅನಂತರಂ

ಬಿಸುರುಹನೇತ್ರೆಗೆ ಜಾನಕಿ
ಗೆ ಸುಟ್ಟಿ ತೋಱುತ್ತಮುಱಿಪಿದಳ್ ಪರಿವಿಡಿಯಿಂ
ಪೆಸಗೊಂಡು ವೃದ್ಧ ಕಂಚುಕಿ
ಪೆಸರ ನೃಪಾತ್ಮಜರ ವಂಶವೀರ್ಯಶ್ರುತಮುಂ || ೬

ಅಂತಱಿಪುವುದುಂ

ಕಡು ಮುಂದಮುಪ್ಪ ಕಣ್ಣೆಮೆ
ಕುಡುವುರ್ವಂ ತುಡುಕೆ ನೋಡೆ ಮೊಗರಸವೆಂಬಿಂ-
ಗಡಲೊಳ್ ಪೊಳೆವೆಳವಾಳೆಯ
ಬೆಡಂಗನೊಳಕೊಂಡುವಕ್ಷಿಗಳ್ ಜಾನಕಿಯಾ || ೭

ನನೆಯ ಸರಲ್ಗಳಂತೆ ನೆಟಿಿದಿಂಗಳ ಕಣ್ಗದಿರಂತೆ ಕಂತುರಾ-
ಜನ ಕರವಾಳಮೆಯ್ಬೊಳಪಿನಂತೆ ನವೋತ್ಪಲದಾಮದಂತೆ ಪೂ-
ವಿನ ಮಟಿಯಂತೆ ತುಂಬಿಗಳ ಮಾಲೆ ತೆಱಂಬೊಳೆವಂತೆ ಲೋಲಲೋ-
ಚನರುಚಿ ಸುತ್ತಿಮುತ್ತಿದುದಶೇಷನೃಪಾಲಸಭಾಂತರಾಳಮಂ || ೮

ಅಂತು ನೋಡಿ

ಎಱಗದೆ ಪೂತ ಚಂಪಕವನಕ್ಕೆ ನವೇರುಮಹೀರುಹಕ್ಕೆ ಬಂ-
ದೆಱಗುವ ಚಂಚರೀಕದವೊಲಾಕೆಯ ಕೇಕರಮನ್ಯರಾಜಕ-
ಕ್ಕೆಱಗದೆ ರಾಘವಂಗೆಱಗೆ ಕಂಚುಕಿ ಕಣ್ಣಱಿದಾ ಲತಾಂಗಿಗ-
ಳ್ಕಱಿೊಳಭಿವರ್ಣಿಸಲ್ ಬಗೆದಳಾ ಧರಣೀಶಗುಣೈಕದೇಶಮಂ || ೯

ಪ್ರಾಕೃತನಲ್ಲನೀ ದಶರಥಾಗ್ರತನೂಭವನೇಕವಾಕ್ಯನಾ
ಶಾಕರಿಕರ್ಣಚಾಮರಯಶಂ ಚರಮಾಂಗನನಂತವೀರ್ಯನಿ-
ಕ್ಷ್ವಾಕುಕುಲಾಮೃತಾರ್ಣವಸುಧಾಕಿರಣಂ ರಣಮೇರು ಲೋಕಲುಂ-
ಟಾಕನಿದಾಘತಾಪಹರವರ್ಷಣಮೇಘನುದಾತ್ತರಾಘವಂ || ೧೦

ಕರಿಯಂ ಕಾಮಂ ಬಿಸ ಪಾಂ-
ಡುರವರ್ಣಂ ರಾಮನಿದುವೆ ಭೇದಮಭೇದಂ
ನಿರತಿಶಯಮಪ್ಪ ರೂಪಿಂ
ವರನಾಗಲ್ ನಿನಗೆ ತಕ್ಕನೀ ರಘುವೀರಂ || ೧೧

ಎಂಬುದುಮಾ ಸಮಯದೊಳಾ ವಿದ್ಯಾಧರ ಮಹತ್ತರಂ ವಿಧಿಪೂರ್ವಕ
ಮಾ ವಿಷಮಚಾಪಮನರ್ಚಿಸುವುದುಂ

ರಸನಾಶಂಪಾಶತಂ ಸಂಚಳಿಸೆ ಪುದಿಯೆ ಫೂತ್ಕಾರಮಾಶಾಂತಮಂ ಪ-
ಳ್ಳಿಸೆ ವಹ್ನಿಜ್ವಾಲೆ ದೀರ್ಘಾನನಕುಹರಸಹಸ್ರಂಗಳಿಂ ಕಣ್ಗಳಿಂದೆ-
ಣ್ದೆಸೆಗಂಗಾರಂಗಳೆತ್ತಂ ಕೆದಱೆ ಫಣಸಹಸ್ರಂಗಳಂ ಬಿರ್ಚಿ ಕಣ್ಗ-
ವಿರ್ಸಿ ವಜ್ರಾವರ್ತಚಾಪಂ ಪಡೆದುದು ಭಯಮಂ ಕಾಳ
ಕಾಳಾಹಿರೂಪಂ || ೧೨

ಸಿಡಿಲಂತೆ ಮೊಳಗಿ ನೆಲನಂ
ಪೊಡೆಯುತ್ತುಂ ಪತ್ತು ದೆಸೆಗಮುವ್ವಳಿಸುತ್ತುಂ
ಪಡೆದುವಗುರ್ವಂ ಜವನೆರ್ದೆ-
ಗಿಡೆ ವಜ್ರಾವರ್ತಸಾಗರಾವರ್ತಂಗಳ್ || ೧೩

ಈ ವಜ್ರಾವರ್ತ ಕೋದಂಡಮನವಯವದಿಂದೇಱಿಸಲ್ ಸಾಲ್ವದೋರ್ದಂ-
ಡಾವಷ್ಟಂಭಪ್ರಚಂಡಂ ಜನಕಜೆಗೆ ವರಂ ಬರ್ಪುದೆಂಬೀ ವ್ಯವಸ್ಥಾ-
ರಾವಂ ಕರ್ಣಾವತಂಸಂ ಪಸರಿಸೆ ನಿಜಪೀಠಂಗಳಿಂದೆೞ್ದುದಾಗಳ್
ತೀವ್ರತ್ರೀರ್ಜನ್ನಿಗಂ ಭೂಷಣರುಚಿ ಕಕುಭಾನೀಕಮುಂ ರಾಜಲೋಕಂ || ೧೪

ಮನಸಿಜನುಂ ಚಂದ್ರಮನುಂ
ದಿನಕರನುಮನೇಕರೇಕೆ ನೆರೆದರೊ ಪೇೞಿಂ-
ಬಿನೆಗಂ ನೃಪತನಯರ್ ಬಿ-
ಲ್ಲನೇಱಿಸಲ್ ತಮ್ಮ ಬೆಳಗೆ ಬೆಳಗೆನೆ ಬಂದರ್ || ೧೫

ಅಂತು ಬಂದಗುರ್ವು ಪರ್ವೆ ಬಿಗುರ್ವಿಸಿದ ಬಿಲ್ಗಳಂ ಕಂಡು ಭಯಂಗೊಂಡು

ಉರಿಯುಂ ಕಾಱುವ ಕೆಂಡಮುಂ ಕಱೆವ ಬಿಲ್ಲಂ ಕಂಡೆವಿಲ್ಲುಕ್ಕೆವಂ
ತರುಣೀರತ್ನಮನಿೞ್ದುಕೊಳ್ವ ಸಮಕಟ್ಟೆಂದಟ್ಟಿದಂ ಖೇಚರಂ
ಮರುಳಾದಂ ಜನಕಂ ವ್ಯವಸ್ಥೆಯನೊಡಂಬಟ್ಟಾರೊ ಕಲ್ಯಾಣತ-
ತ್ಪರರೀ ಮಂಗಳಲಗ್ನದೊಳ್ ಕುಳಿಕದಂಷ್ಟ್ರಾಲಗ್ನಮಂ ಸೈರಿಪರ್ || ೧೬

ಅಹಿದರ್ಶನಮಲ್ತು ಶುಭಾ-
ವಹಂ ವಿವಾಹಕ್ಕೆ ವಿಷಮಮೀ ಮಾರ್ಗಮಹಿ-
ಗ್ರಹಣಂ ಮುನ್ನಂ ಪಾಣಿ-
ಗ್ರಹಣಂ ಬೞಿಯಂಗಳಿನ್ನವಘಟಿತಮೊಳವೇ || ೧೭

ಮಧುಪರ್ಕಮಲ್ತು ಮಂಗಳ-
ವಿಧಾನದೊಳಗೊಂದುಮಲ್ತು ಪಾವಂ ಪಿಡಿವೀ
ವಿಧಿ ಕನ್ಯಾಪರಿಣಯನ
ಪ್ರಧಾನಕಾರ್ಯಂ ಗಡಿನ್ನವಘಟಿತಮೊಳವೇ ॥ ೧೮

ಕುಡುವೆಂ ಜಾನಕಿಯಂ ಪಿಡಿ-
ದೊಡಜಗರಮನೆಂದು ಮುನ್ನ ಪೇೞ್ದೊಡೆಯಾ ಗಾ
ರುಡಮಂ ಕಲ್ತು ವಿವಾಹ-
ಕ್ಕೊಡರಿಸುವಂ ಜಱಿದೆ ಪಿಡಿವನಾವನೊ ಪಾವಂ ॥ ೧೯

ದೂರದೊಳಂಜದೀಕ್ಷಿಸುವ ಕಣ್ಗಲಿಗಳ್ ನೃಪರಾರುಮಿಲ್ಲೆನಲ್
ಸಾರೆವರಲ್ ಮನಂಗಿಡದ ಮೆಯ್ಗಲಿಯಾವನೊ ಬಾಹುವೀರ್ಯದಿಂ
ದಾರಿವನೆತ್ತಲಾರ್ಪನೆನಲೇಱಿಸುವುದ್ಧತವೃತ್ತಿ ನಾಡೆಯುಂ
ದೂರಮಿವರ್ಕೆ ಬಿಲ್ಪಿಸರನಿಟ್ಟವನುರ್ವಿಗೆ ನಂಜನಿಟ್ಟವಂ ॥ ೨೦

ಎಂದು ನೆರೆದರಸುಮಕ್ಕಳೆಲ್ಲರಾ ಬಿಲ್ಲಂ ಕಂಡು ಬಲ್ಗರಂ ಪೊಡೆದಂತೆ ಪೆಡಂ ಮಗುಳೆ-

ದೇಶಾಧೀಶತನೂಭವರ್ ಸೆಡೆವುದುಂ ಸಾಕೇತಸಿಂಹಾಸನಾ-
ಧೀಶಂ ಕಂಡು ದರಸ್ಮಿತಂ ದಶರಥಂ ಭ್ರೂವಲ್ಲರೀಪಲ್ಲವಾ-
ದೇಶಂ ನೋಡೆ ಮುಖಾಬ್ಜಮಂ ಸಭೆಯಿನೆೞ್ದಂ ತುಂಗವಂಶಂ ಸುರೇಂ-
ದ್ರಾಶಾದಂತಿಬಲಂ ಜಿತಾಹಿತಬಲಂ ದುರ್ವಾರಬಾಹಾಬಲಂ ॥ ೨೧

ಅಂತು ತಳರ್ವುದುಂ-

ಜನನಯನ ಪ್ರತಿಬಿಂಬಂ
ತನುರುಚಿಯೊಳ್ಪೊಳೆಯೆ ನಡೆವ ನೆಯ್ದಿಲ್ಗೊಳಸಂ
ನೆನೆಯಿಸಿ ಮಾಣ್ದನೆ ರಾಮಂ
ನೆನೆಯಿಸಿದನನುಕ್ಷಣಂ ಸಹಸ್ರೇಕ್ಷಣನಂ ॥ ೨೨

ಬಲಭದ್ರಂ ರಜತಾದ್ರಿ ಬರ್ಪ ತೆಱದಿಂ ಬಂದಂ ಧನುರ್ದರ್ಶನಾ-
ಕುಲರಂ ರಾಜತನೂಜರಂ ಸ್ಮಿತಮುಖಂ ನೋಡುತ್ತುಮುದ್ಭ್ರೂಲತಂ
ಕೆಲರಂ ಮೂರ್ಛೆಗೆ ಸಂದರಂ ಕೆಲಬರಂ ಬೆಳ್ಕುತ್ತು ಬೆಸ್ನಿತ್ತರಂ
ಕೆಲರಂ ಬೆಕ್ಕಸಮುತ್ತರಂ ಕೆಲಬರಂ ಶಂಕಾವಿಷಾತಂ ಕರಂ ॥ ೨೩

ಅಂತೆಯ್ದೆವರ್ಪುದುಂ-

ಪದನಖದೀಪ್ತಿಮಂಜರಿ ನಿಜೋಳಕದಂತಿರೆ ತನ್ನನಾವಗಂ
ಪುದಿಯಲೊಡಂ ಬಿಗುರ್ವಣೆ ರಘೂದ್ವಹಸನ್ನಿಧಿಯಿಂದದೃಶ್ಯಮ-
ಪ್ಪುದುಮಿಳಿದಾಯ್ತು ಚಾಪಲತೆ ರೋಹಣಶೈಲವಿಷಾಪಹಾರ ರ-
ತ್ನದ ವಿತತಾಂಶು ತಳ್ತಡರೆ ನಿರ್ವಿಷಮಾದ ಮಹಾ ವಿಷಾಹಿವೋಲ್ ॥ ೨೪

ಆಗಳಾ ವಿಷಮಕೋದಂಡಮನೇರಂಡಕಾಂಡಮುಮಂ ಬಗೆವಂತು ಬಗೆದು-

ಪದುಳಂ ನಿಂದೆಡಗಯ್ಯೊಳೊತ್ತಿ ರಘುಜಂ ಕೊಪ್ಪಂ ಪದಾಂಗುಷ್ಠಮೂ-
ಲದೊಳಿಟ್ಟೇಱಿಸೆ ಕಾಲದಂಡನಿಭಮಂ ಕೋದಂಡಮಂ ಭೂತಳಂ
ಪದುಳಂ ನಿಂದುದೆ ಶೇಷಕಂಠ ಕಠಿನಾಸ್ಥಿಶ್ರೇಣಿ ನುರ್ಗಾಗದಿ-
ರ್ದುದೆ ಕೂರ್ಮೋನ್ನತ ಕರ್ಪರಂ ನಳಿದು ಬೆನ್ನಂ ಪತ್ತದೇಂ
ಮಾಣ್ಬುದೇ ॥ ೨೫

ಇರ್ಮೆ ಭರಂಗೆಯ್ದನೆ ಗೊಲೆ-
ಗೊರ್ಮೊದಲೊತ್ತಿದನಗುರ್ವು ಮೆಯ್ವೆತ್ತುದನಾ
ಕಾರ್ಮುಕಮಂ ರಘುವೀರನ
ದೋರ್ಮುಂಡಳಶಕ್ತಿ ಮನುಜಸಾಧಾರಣಮೇ ॥ ೨೬

ಪುಲಕಂ ಜಾನಕಿಗುತ್ಸವಂ ಜನಕರಾಜಂಗುಮ್ಮೞಂ ಖೇಚರಾ-
ವಲಿಗುದ್ವೇಗಭರಂ ನರೇಂದ್ರಸುತಸಂದೋಹಕ್ಕೆ ಸಮ್ಮೋಹನಂ
ಲಲನಾಶ್ರೇಣಿಗೆ ವಿಸ್ಮಯಂ ಪುರಜನಕ್ಕಾಕರ್ಷಣಂ ಲೋಚನಾ-
ವಲಿಗಾಯ್ತೋಱಿಸಿ ಸೀವಿ ಜೇವೊಡೆಯೆ ವಜ್ರಾವರ್ತಮಂ ರಾಘವಂ ॥ ೨೭

ತದನಂತರಂ–

ಸಮದಂ ಲೀಲೆಯಿನೆತ್ತಿ ಖೇಚರಬಲಂ ಕಿಱ್ತೆತ್ತಿ ಪಾಱುತ್ತಸು-
ಕ್ರಮದಿಂದಾನತವಾಗೆ ಕೊಪ್ಪು ಪಿರಿದುಂ ಲಜ್ಜಾನತಂ ರಾಜಲೋ-
ಕಮಣಂ ಬೆಕ್ಕಸಮುತ್ತುದೇಱಿಸುವುದುಂ ಕೋದಂಡಮಂ ರಾಮನ-
ಶ್ರಮದಿಂ ಮನ್ಮಥನಾಗಳೇಱಿಸದೆ ಮಾಱಿಚ್ಚಂ ಪುರಸ್ತ್ರೀಯರಂ ॥ ೨೮

ಅವತಂಸಮಾದುವಮರ-
ಸ್ತವನಂಗಳ್ ಸಕಳ ಜನದ ಜಯಜಯ ನಿನದಂ
ಕಿವಿಸದ್ದಂ ಕಿಡಿಸಿದುದು–
ತ್ಸವಪಟಹಧ್ವನಿಗಳುಣ್ಮೆ ಪೊಣ್ಮಿದುವಾಗಳ್ ॥ ೨೯

ಎತ್ತಿದುವು ಮಂಗಲಧ್ವಜ-
ಮೆತ್ತಿದುದು ಸಿತಾತಪತ್ರವಾಗಸಮಂ ಪೊ-
ತ್ತೆತ್ತಿದುದಾಶೀರ್ವಾದಂ
ಮುತ್ತಿನ ಸೇಸೆಗಳನಿಕ್ಕಿದರ್ ಮಾನಿನಿಯರ್ ೩೦

ಆಗಳಾ ಬಳನ ದೋರ್ಬಲಕ್ಕೆ ಕಂಚುಕಿ ರೋಮಾಂಚಕಂಚುಕಿತ ಶರೀರೆಯಾಗಿ ಜಾನಕೀದೇವಿ ನಿಜಮನೋರಥಂ ಸಫಲವಾದುದಿದುವೆ ಪುಣ್ಯಾವಹಸಮಯಮಖಿಲರಾಜಕುಲಶೇಖರನಂ ಕುಸುಮಶೇಖರನಂ ಮಾಱ್ಪುದೆಂದು ಬಿನ್ನವಿಸೆ-

ಆವೆಡೆ ಹಂಸೆಗೀನಡೆಯ ಚೆಲ್ವಿನೆ ನೂಪುರದಿಂಚರಂ ಸ್ಮರಂ
ಜೇವೊಡೆದಂದವಾಗೆ ಮೃದುಪಾದತಳಂಗಳ ಕೆಂಪು ಕೂಡೆ ಕೆಂ-
ದಾವರೆವೂಗಳಂ ಕೆದಱುವಂತಿರೆ ಕುಂತಳಸೌರಭಕ್ಕೆ ಭೃಂ-
ಗಾವಳಿ ಮೇಲೆ ಪೀಲಿದಟ್ಟೆಯಂತಿರೆ ಬಂದಳದೊಂದು ಲೀಲೆಯಿಂ ॥ ೩೧

ಅಲರ್ಗಣೆಯನಂಗಜಂಗೀ-
ಯಲೆಂದು ರತಿ ಬರ್ಪ ಮಾಟ್ಕೆಯಿಂ ಮಾಲೆಯನಾ
ಲಲಿತಾಂಗಿ ಪಿಡಿದು ಕಣ್ಗಂ
ಕೆಲಕ್ಕಮಾ ದಾಶರಥಿಯ ಬಗೆಗಂ ಬಂದಳ್ ॥ ೩೨

ಅಂತು ಬಂದು-

ಮಾಲೆಯ ಮೇಲೆ ತುಂಬಿಗಳ ಮಾಲೆ ತೆಱಂಬೊಳೆದಾಡೆ ಬೇಱೆ ಪೂ-
ಮಾಲೆಯ ಲೀಲೆಯಂ ಕೆದಱೆ ಕೇಕರಮಾಲೆ ಶಿರೀಷಮಾಲೆಯಂ
ಸೋಲಿಸೆ ನೀಳ್ದ ಬಾಹುಲತೆ ತೋಳಮೊದಲ್ ಮದನಾನುರಾಗಮಂ
ಸಾಲಿಡೆ ಸಾರ್ದು ಸೀತೆ ರಘುವಂಶನಮೇರುಗೆ ಮಾಲೆ ಸೂಡಿದಳ್ ॥ ೩೩

ತನುಸೋಂಕಿಂ ಮೆಯ್ಗೆ ರೋಮಾಂಚಮನೊದವಿಸಿ ರಾಮಂಗೆ
ವೈದೇಹಿ ನೀರೇ-
ಜನಿಸರ್ಗಾಮೋದಗಂಧೋದಕ ಸವನವ-ನಿತ್ತ್ರಟ್ಕೆಱಿಂ ಬಾಹುಮೂಲಂ
ಸ್ತನಮೂಲಂ ನಾಭಿಮೂಲಂ ತ್ರಿಗುಣಿಸೆ ಸುಮನಶ್ಯೇಖರಂ ಮಾಡಿ ಕಂದ-
ರ್ಪನ ವಾಮೋಪಾಂತದೊಳ್ ರಂಜಿಸುವ ರತಿಯ ಸೌಂದರ್ಯಮಂ
ಸೂಱೆಗೊಂಡಳ್ ॥ ೩೪

೩

# ಹರಿಹರದೇವ

## ಮಲುಹಣನ ರಗಳೆ

ಕಂದ : ಧಾರುಣಿಯೊಳ್ ಮಲುಹಣನಂ
ಕಾರುಣ್ಯಾಕರನುದಾರವಾರಿಧಿ ಮೆರೆದಂ
ಗೌರೀಕುಚಕುಂಕುಮಲಸಿ-
ತೋರಸ್ಥಲನೆಮ್ಮ ಹಂಪೆಯ ವಿರೂಪಾಕ್ಷಂ ||

### ರಗಳೆ

ಶ್ರೀ ವಸುಮತೀವದನಮುಕುರವೆಂದೆನಿಸಿರ್ಪ
ಪಾವನಂ ಸಕಲ ದೇಶಕ್ಕೆ ತಾನೆನಿಸಿರ್ಪ
ಶಾರದಾದೇವಿ ಪ್ರಸನ್ನೆಯಾಗಿರುತಿರ್ಪ
ಚಾರುತರ ನೂತನ ಕಳಾವಿದರೊಳಿರುತಿರ್ಪ
ಊರೂರ್ಗೆ ತೀವಿದ ತಟಾಕನಿಕರಂಗಳಿಂ
ಊರೂರ್ಗೆ ಕಿಕ್ಕಿರಿದು ಕೊರ್ವಿದ ಬನಂಗಳಿಂ
ಬನದೊಳಗೆ ಸುಳಿತರ್ಪ ಕಸ್ತುರಿಮೃಗಂಗಳಿಂ
ಬಿನದದಿಂ ಪರಿತರ್ಪ ಚಮರೀಮೃಗಂಗಳಿಂ
ದೇವಮಾತೃಕ ನದೀಮಾತೃಕದ ಬೆಳೆಗಳಿಂ
ದೇವನದಿಯಂದದಿಂ ಪರಿವರಿವ ನದಿಗಳಿಂ

ನಗರಿ ನಗರಿಯೊಳೆಸೆವ ದೇವಾಲಯಂಗಳಿಂ
ಮುಗಿಲನಳ್ಳಿಱಿವ ಘನ ಮಾಡಕೂಟಂಗಳಿಂ
ಎಸೆವ ಕಾಶ್ಮೀರದೇಶಂ ರಂಜಿಸುವುದಿಳೆಗೆ
ಹೊಸಹೊಸ ಬನಂ ಪಟ್ಟಣಂಗಳಿಂದುರ್ವರೆಗೆ

ಆ ದೇಶದೊಳ್ ರಾಜಧಾನಿಯೆನಲೊಪ್ಪುವುದು
ಭೂದೇವತೆಯ ನೊಸಲ ತಿಲಕವೆನಲೊಪ್ಪುವುದು
ಭಾರತೀಪೀಠವೆಂಬುದು ಪಟ್ಟಣದ ನಾಮ
ಈರೇಳು ಲೋಕಕ್ಕೆ ಕೀರ್ತಿವಡೆಯಿತು ನಾಮ
ಪಟ್ಟಣವನಾಳ್ವನಪ್ರತಿಮಭೂಪಂ ನೋಡ
ಕಟ್ಟಧಿಕನುತ್ತಮ ಪ್ರವರಸೇನಂ ನೋಡ
ಆ ಪ್ರವರಸೇನ ರಾಜಂಗೆ ಹೊಯ್ಕಯ್ಯೆನಿಸಿ
ವಿಪ್ರನೊಪ್ಪುವನಾ ಪುರಕ್ಕೆ ಧನಪತಿಯೆನಿಸಿ
ತನ್ನ ಪೆಸರೊಪ್ಪುವ ಸುವರ್ಣ ಭಟ್ಟಂ ನೋಡ
ತನ್ನ ಸಂಪನ್ನತೆ ಕುಬೇರಂಗೆ ಸರಿ ನೋಡ

ಇಂತೆಸೆವ ವಿಪ್ರಂಗೆ ಸುತನೋರ್ವನೊಪ್ಪುವಂ
ಸಂತತ ಸುವರ್ಣಭಟ್ಟನ ಮನವನಪ್ಪುವಂ
ಆತನ ಪೆಸರ್ ಪುರಕೆ ಮೆಱೆವ ಮಲುಹಣನೆಂದು
ಆತನ ವಿಳಾಸದೊಳ್ ಪಿತನ ಚಿತ್ತಂ ಸಂದು
ಉಪನಯನ ವೈವಾಹಮುಂ ವಿಭವದಿಂ ಮಾಡಿ
ವಿಪುಳ ವೇದಂ ಸಕಲ ಶಾಸ್ತ್ರಜ್ಞರಂ ಕೂಡಿ
ಶೈವೋಪದೇಶಮುಂ ಪಿರಿಯರಿಂ ಮಾಡಿಸುತೆ
ದೈವಜ್ಞನಪ್ಪ ಮಗನಂ ನೋಡಿ ಪುಳಕಿಸುತೆ
ಇಂತು ಪುತ್ರನನೋವಿ ಕಣ್ದೀವಿ ನೋಡುತಂ
ಸಂತತಂ ಮಲುಹಣನ ಮೋಹದೊಳ್ ನಲಿಯುತಂ

ಚಿಂತಿಸಿದನಾತಂಗೆ ಸುಖದೊಳಿರ್ಪಂದಮಂ
ಮುಂತೆ ಮಾನಿಸರ ಹಂಗಿಲ್ಲದೊಂದಂದಮಂ
ನಿಚ್ಚಂ ಸಹಸ್ರ ಹೊನ್ನಂ ಲೆಕ್ಕವಂ ಮಾಡಿ
ಅಚ್ಚರಿವಿಗಲ್ ನೂಱು ವತ್ಸರಕ್ಕೆಸುಮಾಡಿ
ಓರ್ವಂಗೆ ಪರಮಾಯು ನೂಱು ವತ್ಸರಮೆಂದು
ಸರ್ವ ಧನದೊಳಗೆ ತೆಗೆದಂ ಮೂಲಹಣಂಗೆಂದು
ನೂಱು ಕೋಟಿಯ ಮೇಲೆ ಲಕ್ಕವಱುವತ್ತಾಗೆ
ಬೇಱೆ ವಿವರಿಸಿದ ಹೊನ್ನುಂ ಮೂಲಹಣಂಗಾಗೆ
ಕಟ್ಟಿ ಮುದ್ರಿಸಿದಂ ಸುವರ್ಣಭಟ್ಟಂ ನೋಡ
ಪಟ್ಟಣಕ್ಕಿಳೆಗೆ ಪೊಸತಾಗಲಾತಂ ನೋಡ
ಈ ತೆಱದೊಳರ್ಥಮಂ ಪುತ್ರಂಗೆ ಬೈತಿಟ್ಟ
ನೂತನ ಸುಖಂಗಳಂ ಮನದೊಳಗೆ ಮುಂತಿಟ್ಟು
ಒಂದೆರಡು ವತ್ಸರಂ ಸುಖದೊಳಿರ್ಪನಿತಕ್ಕೆ
ಸಂದಣಿಸಿ ಹರ್ಷದಿಂ ಪದುಳವಿರ್ಪನಿತಕ್ಕೆ

ಬಂದುದು ಸುವರ್ಣಭಟ್ಟಂಗೆ ಕಾಲನ ದಾಳಿ
ನಿಂದು ಸೋಂಕಿತ್ತುಸುವನೆಯ್ದೆ ರೋಗದ ದಾಳಿ
ಸೋಂಕಲುಗ್ರಜ್ವರಂ ತಾಪದಿಂದಳ್ಕಿದಂ
ಭೋಂಕನೆ ಸುವರ್ಣಭಟ್ಟಂ ದಿವಕ್ಕೈದಿದಂ
ತಂದೆ ಸ್ವರ್ಗಸ್ಥನಾದುದನಱಿದು ಮೂಲಹಣಂ
ಮುಂದುಗೆಟ್ಟಱಿವುಗೆಟ್ಟೊಱಲುತ್ತೆ ಮೂಲಹಣಂ
ಸರ್ವ ಸಂಭ್ರಮದಿಂದ ತಂದೆಯಂ ಸಂಸ್ಕರಿಸಿ
ಸರ್ವ ಮುಖದಿಂ ಪಿಂಡಪಿತೃಕಾರ್ಯಮಂ ಸಲಿಸಿ
ಸಕಲ ಭರಭಾರಕ್ಕೆ ತಾನೆ ವಲ್ಲಭನಾಗಿ
ಸಕಲ ಪರಿಜನಕೆಲ್ಲ ರಕ್ಷೆ ಶಿಕ್ಷಕನಾಗಿ

ಉತ್ತಮಂ ವ್ಯವಹಾರಪರಿಣತಂ ತಾನಾಗಿ
ಉತ್ತಮೋತ್ತಮ ಸಂಪದಕ್ಕೆ ನೆಲೆವನೆಯಾಗಿ

ಇರೆ ಮಲುಹಣನನಪ್ಪಿದುದು ಯೌವನೋದಯಂ
ಸ್ಮರನ ಕೈಗೆಯ್ದಿತ್ತು ಪುಷ್ಪಚಾಪೋದಯಂ
ಸವಿನುಡಿಗಳಂ ಕಿವಿಗಳಾಲಿಸಲ್ತೊಡಗಿದವು
ಅವಯವಂ ಮೃದುವಸನದಿಚ್ಚೆಯನೊಡರ್ಚಿದವು
ನೋಟವೊಪ್ಪುವ ರೂಪನೆಚ್ಚರಿಸಲೆಳಸಿದವು
ತೋಟಿಗೆಳಸುವ ಪುರ್ಬು ಗಂಟಿಕ್ಕತೊಡಗಿದವು
ನವ ಮಧುರವಂ ಜಿಹ್ವೆ ಬಯಸಲನುಗೈಯಿತ್ತು
ನುಡಿ ಮೆಲ್ಲಮೆಲ್ಲನಕ್ಷಿಗಳತ್ತ ಹೊದ್ದಿತ್ತು
ನಡೆಯುರವಣೆಯನುಳಿದು ಗಮಕದೊಳ್ ಬೆರಸಿತ್ತು
ಕರತಳಂ ತನುರುಚಿಯ ನೋವನಂಗೈಸಿದವು
ಕರಣತತಿ ಭೋಗಸಂಪದಸುನಿಚ್ಛೈಸಿದವು
ಇಂತು ಸರ್ವೇಂದ್ರಿಯಂ ಸುಖದ ಬಳಕೆಗೆ ಸಲಲ್
ಕಂತು ಚಿಂತಿಸಿ ಷೋಡಶಪ್ರಾಯದೊಳ್ ನಿಲಲ್
ಅಂಗರುಚಿ ಮುಗ್ಧೆಯರ ಕಣ್ಗೆ ಕನ್ನಡಿಯಾಗೆ
ಅಂಗಲತೆ ತರುಣಿಯರ ಸಂಗಸಂಪದಮಾಗೆ
ಸುರಕುಜದ ಚಂದನದ ಕರ್ಪುರದ ಸಸಿಯಂತೆ
ಪರಿಮಳದ ಚಂದ್ರಿಕೆಯ ಕಾಂತಿ ಕರುವಿಟ್ಟಂತೆ
ಬೆಳೆಯುತಿರ್ದಂ ಸುಖಮನೆಳಸಿ ಮಲುಹಣನಿತ್ತ
ಬೆಳೆಯುತಿರ್ದಳ್ ಸುಖಾಕಾರೆ ಮಲುಹಣಿಯತ್ತ

ಆ ದೇಶದಧಿದೈವವೆನಿಪ ವಿಜಯೇಶ್ವರನ
ವೇದಕ್ಕಗಮ್ಯವೆಂದೆನಿಪ ವಿಜಯೇಶ್ವರನ
ಪಾತ್ರದ ವಿಳಾಸಿನಿಯೆನಿಪ್ಪ ಪದ್ಮಾವತಿಯ
ಚಿತ್ರತರ ಮಧುರತರ ನಾಟಕಕಳಾವತಿಯ

ಎಸೆವ ಬಸಿಱೊಳ್ ಬಂದು ಶಿಶುಭಾವಮಂ ತಳೆದು
ಕುಸುಮಬಾಣನ ಕೀರ್ತಿ ಬೆಳೆವಂದದಿಂ ಬೆಳೆದು
ಮಲುಹಣೆಯ ಜನ್ಮನವನೇನೆಂದು ಬಣ್ಣಿಪೆಂ
ಮಲುಹಣನ ಸಕಲ ಸುಖನಿಧಿಯನೇನೆಂದಪೆಂ

ಮನವನೆಡೆಗೊಂಡನಾ ಮನಸಿಜಂ ಪರಿತಂದು
ತನುವನೆಡೆಗೊಂಡುದಾ ಸೌಭಾಗ್ಯವೆಯ್ತಂದು
ಪ್ರೇಮದಿಂ ಮಧುರೂಪಿನೊಳ್ ಪುಗಲ್ ನೂತನಂ
ಪೂಮುಡಿಯನಿಂಬುಗೊಂಡುದು ಮಕರಕೇತನಂ
ಭ್ರೂಲತೆಯನಾಶ್ರಯಿಸಿತಿಕ್ಷುಚಾಪಂ ನೋಡ
ಆಲೋಕನವನೊತ್ತುಗೊಂಡವಲರ್ಗಣೆ ನೋಡ
ಮಿಗೆ ಸೊಬಗಿನೊಳ್ ಪೊಕ್ಕಳಲ್ಲಿ ರತಿಯೆಯ್ತಂದು
ಮೊಗಮನೋಲೈಸಿದಳ್ ಸರಸಿಜಶ್ರೀ ಬಂದು
ನೆಯ್ದಿಲೆಯರಲ್ ಬಯಸಿ ಕರ್ಣಪಾಲಿಕೆಯೊಳಿರೆ
ಎಯ್ದೆ ಶಶಿಕಾಂತ ಗಂಡಸ್ಥಲವನಪ್ಪುತಿರೆ
ಗಂಧವಹನೆಳಸಿ ಮಧುರಶ್ವಾಸದೊಳ್ ಪುಗಲ್
ಬಂಧುರ ಮೃಣಾಲರುಚಿ ಭುಜಲತೆಗಳೊಳ್ ಮಿಗಲ್
ಕೆಂದಾವರೆಯ ಕೆಂಪು ಪದತಳಮನೋಲೈಸೆ
ಮಂದಯಾನಂ ಎಸೆವ ಹಂಸಗತಿಯಾವರಿಸೆ
ಇಂತು ಸರ್ವಾಂಗಸೌಂದರ್ಯಮಂ ಕೆಳೆಗೊಂಡು
ಕಂತು ಮೊದಲಾಗಿ ಚರಿಸುವ ರೂಪನೊಳಕೊಂಡು
ಅಳಿ ತುಡುಕದಿರ್ಪ ಮಘಮಘಿಪ ಬಿರಿಮುಗುಳಂತೆ
ಎಳಸುವ ಚಕೋರಿ ಮೊಗವಿಡದ ಚಂದ್ರಿಕೆಯಂತೆ
ಪಿಕಚಂಚುಸಂಚಾರವಿಲ್ಲದೆಳದಳಿರಂತೆ
ಶುಕಮುಖದಿ ಅಣ್ಣೆವಳಿಯದ ಪಕ್ವಫಳದಂತೆ

ತೊಳತೊಳಗಿ ಬಳೆವುತಿರ್ದಳ್ ಚಂದ್ರಕಳೆಯಂತೆ
ನಳನಳಿಸಿ ಬಳೆವುತಿರ್ದಳ್ ಕುಸುಮಶರದಂತೆ
 ಬಳೆವ ಮಲುಹಣಿಯ ರೂಪಂ ಜನನಿ ಮಿಗೆ ನೋಡಿ
ಆಳವಲ್ಲದಕ್ಕರಿಂ ಸುಖರಸದೊಳೋಲಾಡಿ
ನವಯೌವನದ ನೆಲೆಗೆ ಮನದೊಳಗೆ ತೂಪಿಱಿದು
ಅವಯವದ ಚೆಲ್ವಿಂಗೆ ಕಣ್ಗಳೊಳ್ ತೂಪಿಱಿದು
ಕಡು ನೇಹದಿಂದೆ ನವ ಲಾಸ್ಯಮಂ ಮೈಗೊಳಿಸಿ
ಪ್ರೌಡನೊಲ್ದ ರಸಗಾನಮಂ ನೆಱೆ ಕೊರಳ್ಗೊಳಿಸಿ
ಮಗಳ ನಿಟ್ಟಿಸುತ ಕಣ್ಣೊಳಗಿಕ್ಕಿ ಮುಚ್ಚುತಿರೆ
ಮಿಗೆ ವಿಳಾಸಿನಿಯರಿಂ ಸಿಂಗರಿಸುತಿರುತಮಿರೆ

# ದ್ವಿತೀಯಸ್ಥಲ

ಕಂದ || ಹೊಸನಡೆ ಹೊಸನುಡಿ ಹೊಸಮುಡಿ
ಹೊಸಹೊಸ ಸೌಭಾಗ್ಯವೆಸೆವ ಹೊಸ ಲಾವಣ್ಯಂ ।
ಹೊಸಹರೆಯಂ ಹೊಸನೋಟಂ
ಹೊಸಜವ್ವನದೇಳ್ಗೆ ಮಲುಹಣಿಗೆ ಚಿತ್ರತರಂ ||

## ಗದ್ಯ

ಇಂತೊಪ್ಪೆ ಚರಣಂ ತೀವಿದ ಮಂದಗತಿಯಿಂದಪರಭಾಗಂ ತೀವಿದ ಸಿತಂಬದಿಂದ ಉರಂ ತೀವಿದ ಪೆರ್ಮೊಲೆಯಿಂ ಮೊಗಂ ತೀವಿದ ಲೋಚನದಿಂ ಅವಯವಂ ತೀವಿದ ಚೆಲ್ವಿಂ ಮೆಯ್ ತೀವಿದ ಜವ್ವನದಿಂ ಮನಂ ತೀವಿದ ಸುಖದಿಂ ಮಱೆದು ಮನಸಿಜಂ ಮುದ್ರಿಸಿದ ನನೆಗಣೆಯಂತಿರ್ದ ಮಲುಹಣಿಗೆ ಸುಕುಮಾರಾಂಗಿಗೆ ಹೊಸ ಹರೆಯದೊಡನೆ ರಸಮಯಮೆನಿಪ್ಪ ಲಾಸ್ಯ ಸಂಪದಂ ಕೈಗೂಡಿತ್ತೆಂಬುದಂ ಪದಾ ವತಿಯಱಿದು ವಸಂತಮಾಸದೊಳೊಂದು ದೆವಸಂ ವಿಜಯೇಶ್ವರದೇವರ ಕೇಳಿಸಲೆಂದು ಕ್ಷಣವಂ ಕೈಕೊಂಡು ಮಲುಹಣಿಗೆ ಸಿಂಗರಂ ಮಾಡಲ್ಕೆ ಸಖೀಜನಕ್ಕೆ ಪೇಳೆ

ಕೆಳದಿಯರ್ ನಲಿದು ಬಂದು ಮಾಂದಳಿರ ಹಸೆಯ ಮೇಲೆ ಪುಷ್ಪ ಮಂಜರಿಯಪ್ಪಂತಿರ್ದ ಸುಕುಮಾರಾಂಗಿಗೆ ನನೆಯಂಬಂ ಕೈಗೆಯ್ದು ವಸಂತ

ವಿಳಾಸಿನಿಯರಂತಿರ್ದ ವಿಳಾಸಿನಿಯರ್ ಪುಲುಹಣಿಗೆ ಪಾದಮುದ್ರಿಕೆಯ ನಲಂಕರಿಸಿ ಸೂಡಗಮನವಮರ್ಚಿಸಿ ಸೇವುರಮನಳವಡಿಸಿ ಕಂಕಣಮಂ ತಿರುಂಪಿ ನೂಂಕಿ ರತ್ನಮುದ್ರಿಕೆಗಳಂ ಕೆಯ್ಗೊಳಿಸಿ ಬಾಹುಪೂರಯುಮನಿಕ್ಕಿ ಕರ್ಣಾವತಂಸಮಂ ಕೆಳೆಗೊಳಿಸಿ ಚಕ್ರಮಿಥುನಕ್ಕೆ ಗವಸಣಿಗೆಯನಿಕ್ಕುವಂತೆ ಕುಚಯುಗಕ್ಕೆ ಕಂಚುಕೆಯಂ ತೊಡಿಸಿ ತೋರಮುತ್ತಿನ ಹಾರಮಂ ಹತ್ತೆ ಸಾರ್ಚೆ ಶಶಿಬಿಂಬಕ್ಕೆ ಶುಕ್ರನಂ ಸೇರಿಸುವಂತೆ ಮುಖಬಿಂಬದೊಳ್ ಮುತ್ತಿನ ಮೂಕುತಿಯಂ ಮೇಳೈಸಿ ಕಾವನಂಬಂ ಕತ್ತುರಿಯ ಸಾಣೆಯಿಕ್ಕು ವಂತೆ ಕಜ್ಜಳಮನೆಚ್ಚಿ ಎಳೆಲತೆಯಂ ಬೆಳ್ದಿಂಗಳಿಂ ಬಾಸಣಿಸುವಂತೆ ನವ ದು ಕೂಲಮಂ ನಿಱಿವಿಡಿದುಡಿಸಿ ನಿರ್ಮಳ ಶಶಿಬಿಂಬದಂತಿರ್ದ ಮುಖಮಂಡ ಲಕ್ಕೆ ಚಂದ್ರಮನ ದಿಟ್ಟಿ ತಾಗದಂತೆ ಕತ್ತುರಿಯ ತಿಲಕಮಂ ನೊಸಲೊಳಿಟ್ಟು ಕಾಮನ ಮೆಯ್ವೆಳಗು ಮಱೆವೊಕ್ಕಂತೆ ಕತ್ತಲಿಪ ಮುಡಿಯೊಳ್ ಹೊಸ ಕುಸುಮದೆಸಳಂ ತುಱುಂಬಿ ತೊಡಿಸಿದಾಭರಣಮುಮಂ ಮುಡಿಸಿದ ಪೊಸ ಪುಷ್ಪಂ ನಸುದೋರ್ಪ ಸಪುರದುಕೂಲಮಂ ಮುಸುಂಕಿಟ್ಟು

ಗಿಳಿಹಂಸೆಕೋಗಿಲೆ ಕುಸುಮಕುಲಂ ಮಧುಕರಂ ಮಂದಾನಿಲಂ ಚಂದ್ರಿಕೆಚಕೋರಚಕ್ರವಾಕವೆಳವಳ್ಳಿಗಳ್ ನೆಱೆದು ಬಂದು ಕಾವನ ಪೂವಿನಂಬಂ ನಡುವಿಟ್ಟುಕೊಂಡೋಲೈಸುತಂ ಬರ್ಪಂತೆ ಪದ್ಮಾವತಿ ಮೊದ ಲಾದ ಸಕಲ ಸಂಪ್ರದಾಯಮುಂ ಸಖೀಜನಂಗಳುಂ ಸುತ್ತಿಮುತ್ತಿ ಒರೆ ಮಲುಹಣಿಯ ಮರೆಗೊಂಡು ಕಬ್ಬಿನ ಬಿಲ್ಲಗೊಲೆಗೇರಿಸುತ್ತ ಅಲರಂಬಂ ನಡೆತರೆ ಪೂಸಿದ ಚಂದನದ ಜವಾಜಿಯ ಯಕ್ಷಕರ್ದಮದ ಸೌರಭ್ಯದೊಡ ನೊಡನೆ ದೆಸೆದೆಸೆಗೆ ಪಸರಿಸಿ ತೀಡುವ ಹೊಸ ಜವ್ವನದ ಪಸಿಯ ಕಂಪಿನ ಬಳಿವಿಡಿದು ಸುಳಿಟರ್ ಕವಿದು ಬರೆ ತುಂಬಿಗಳ ಝೇಂಕಾರಂ ಕಂಕಣದ ಝಣತ್ಕಾರಂ ನೂಪುರದ ಕ್ರೇಂಕಾರಂ ಪಾದಮುದ್ರಿಕೆಯ ರಣತ್ಕಾರಂ ಮದನನ ಬಿಲ್ಲ ಟೇಂಕಾರಂ ಬೆರಸಿ ಬೆಳೆದು ಪುರಜನರ ಕಿವಿಗಳ್ಗೆ ಹೊಸ ಸವಿಗಳಂ ಸಾಲಿಡೆ ವಿಳಾಸದಿಂ ವಿಜಯೇಶ್ವರದೇವರ ರಂಗಮಂಟಪಕ್ಕೆ ಬಂದು ಚಂದ್ರಧರಂಗೆ ವಂದನಂಗೆಯ್ದು ಗಿರಿಜಾವಲ್ಲಭನಂ ಕೇಳಿಸಲೆಂದು ಸಕಳ ಸಂಪ್ರದಾಯಮುಂ ಸುಗತಿ ಸಂವರಣೆಗೊಂಡು ರಂಗಂಬುಗುತ್ತಿರಲು

ಇತ್ತ ಮಲುಹಣದೇವಂ ವಿಜಯೇಶ್ವರದೇವಂ ದಿವ್ಯ ಪಾದಪ್ರಣುತ ನಿತ್ಯನಿಯಮಾಸಕ್ತನಾಗಿ ನೊಸಲೊಳಿಟ್ಟ ಭಸಿತದ ಕೀಲಿಸಿದ ಕರ್ಣಾಭರಣದ ಕೈಗೊಳಿಸಿದ ತೋರಹಾರದ ಉಟ್ಟು ಹೊದೆದ ಹೊಸ ದುಕೂಲದ ಕಿವಿಯೊ ಳಂಕೆಗೊಂಡ ಮೃಗಮದದ ಕಕ್ಷಪುಟದೊಳ್ ಮಗಮಗಿಪ ಕತ್ತುರಿಯ ಸಾರದ ಉದ್ವರ್ತನಂಗೆಯ್ವ ಚಂದನದ ತುಱುಂಬಿದ ಕುಸುಮಾವಳಿಯ ಪೊಸ ಕಂಪುಂ ಸೊಗಯಿಸುವ ಸೊಂಪುಂ ಮೋಹಿಸುವ ಬೆಳಗುಂ ಮುಪ್ಪುರಿಗೊಂಡು ಬಳಸಿ ಬೀದಿವರಿಯೆ ಏಱುಂಜವ್ವನದುರ್ಬು ಕೊರ್ಬು ಪರ್ಬುಗೆವಡೆಯೆ ನಿಜ ನಿಳಯಮಂ ಪೊರಮಟ್ಟು ಬರ್ಪಾಗಳ್ ವೇದನಾದಾಕ್ಷರದೊಡನಕ್ಷತೆಗಳಂ ನೀಡುವ ವಿಪ್ರಕುಲದ ನವೀನ ಗದ್ಯಪದ್ಯ ಗಳೊಡನೆ ನಲವರಕೆಯಂ ನೀಡುವ ಕವಿಗಳ ಕೈವಾರದೊಡನೆ ಸ್ತುತಿಗಳಂ ನೀಡುವ ವಂದಿಗಳ ತುಂಬಿಗಳ ನುಣ್ಚರದೊಡನೆ ಜೋಳಿಸಿ ಮಾಣದಾಣತಿ ಗುಡುವ ಗಾಯಕರ ಸಮಕುಲಂ ಸಮಶೀಲಂ ಸಮರೂಪು ಸಮಪ್ರಾಯ ದೊಡನೆ ಮನಂಗೊಡುವ ಮಿತ್ರರೆನಿಪ ವಿಟದೂಷಕನಾಗರಿಕಪೀಠವರ್ಧನರ ನಡುವೆ ಕಾಮನ ಕೆಯ್ಸೆಱೆ ಬರ್ಪಂತೆ ವಿಜಯೇಶ್ವರದೇವರ ಶಿವಾಲಯಕ್ಕೆ ನಡೆ ತಂದು ಪಾದೋದಕಮಂ ಕೊಂಡು ಪೊಡೆಮಟ್ಟು ಬೀಳ್ಕೊಂಡು ಸೌಂದರ್ಯ ಸಂಪನ್ನಂ ವಿಳಾಸನಿಧಿ ಸೌಭಾಗ್ಯಸಾರೋದಯಂ ಸೌಕುಮಾರ್ಯಕಟಾಕ್ಷ ವಿಕ್ಷೇಪಂ ರಸಭರಿತ ಚಿತ್ತನಪ್ಪ ಮಲುಹಣದೇವಂ ತಿರುಗಿ ಬರ್ಪಾಗಳ್

ಮುಂದಣ ರಂಗಮಂಟಪದ ಮಧ್ಯದೊಳಿತ್ತರಂಗೊಂಡೋಲಗವಿತ್ತು ಕುಳ್ಳಿರ್ದ ಪರಮಭಕ್ತರ ಸಚಿವರ ರಾಜಪುತ್ರರ ವಡ್ಡವ್ಯವಹಾರಿಗಳ ಕವಿಗಳ ಕಳಾವಿದರ ನೃತ್ಯರ ಸಾಹಿತ್ಯರ ಸಂಗೀತಸಂಪನ್ನರ ವಿಳಾಸಿನಿಯರ ಪರಿಜನದ ಪುರಜನದ ನಡುವಣ ರಂಗಮಂಟಪದೊಳ್ ನರ್ತನಂಗುಡುವ ತಾಳದ ಗತಿಗುಡುವ ಮದ್ದಳೆಯ ಲಹಣಿಗುಡುವ ಆವುಜದ ದೆಖ್ಖಾಳಂಗುಡುವ ಕರಡೆಯ ಸವಿಗುಡುವ ವೀಣೆಯ ನಯಂಗುಡುವ ಕಿನ್ನರಿಯ ಲಲ್ಲೆಗುಡುವ ಕೌಸಳದ ಹಲ್ಲಣಿಗುಡುವ ಜೇವಣಿಗೆಯರ ಸಂಗೀತದ ಸಂದಣಿಯೊಳ್

ಪುಷ್ಪಾಂಜಲಿಯ ಸಮಯದೊಳ್ ನವೀನಕನ್ಯಾವರವಿವಾಹಮುಹೂರ್ತದ ತೆರೆ ಸರಿವಂತೆ ಮಲುಹಣ ನೋಡೆ ನೋಡೆ ಜವನಿಕೆಯೋಡೆ ದೊಣೆಯನಗಲ್ದ ಕಾಮನಂಬಿನಂತಿರ್ದ ಮಲುಹಣಿಯ ರೂಪಿನೊಳ್ ನೋಟಂ ಸಿಲ್ಕಿ ಎವೆ ಬೆಱಗಾಗಿ ಕಣ್ಗಳ ಧಾರೆಯಿಂದೊಳಪೊಕ್ಕು ರೂಪು ಕರಣವನೊಕ್ಕಲಿಕ್ಕಿ ಭಾವಮಂ ಬಱಿಕೈದು ಚಿತ್ತಮಂ ತೊತ್ತಳದುಳಿದು ಜೋಲ್ದು ಝೊಂಪಿಸಿ ಮಿತ್ರರ ಮೇಲೆ ಮೆಯ್ಯನೀಡಾಡುವ ಜೌವ್ವನಿಗನಂ ಮಲುಹಣಿ ಭೋಂಕನೆ ನೋಡಿ ಕಂಡು ಮನಂ ಬೆದರಿ ಹೃದಯಂ ನಡುಗಿ ತನು ಬೆಮರ್ತು ಗತಿ ಸ್ತಂಭಿಸಿ ಪಾದಂ ಸ್ಪೈಸರಂಬೋಗಿ ಹಸ್ತಂ ಮಲಂಗಿ ನೋಟಮುಚ್ಚೊತ್ತಿ ಮೂರ್ಛಿಸುವ ಮಗಳಂ ಪದ್ಮಾವತಿ ಕಂಡು ಇದೇನಿದೇನು ರಂಗಮಂಟಪಂ ವಿರಹಮಂಟಪವಾದುದು ಈಶ್ವರಕೇಳಿಕೆ ರತೀಶ್ವರಕೇಳಿಕೆಯಾದುದು ಅಕ್ಕಕ್ಕು ಸೋಜಿಗಂ ಸೋಲ್ತ ಮಲುಹಣಂ ಸದರ್ಥನೆಂಬುದಂ ಅಱಿದು ಮನಮಂ ಬಲಿದು ಈರ್ವರುಮನೊಡಗೊಂಡು ಬಂದು ಪರ್ಬಿದ ನೇಹಮಂ ನೆಲೆವೆರ್ಚಲೊಡರ್ಚಿಸಿ ನಿಜ ನಿಳಯಕ್ಕೈತರೆ

ಸಂವತ್ಸರಂಗಳುಂ ದಿನಂಗಳಾಗಿ ದಿನಂಗಳುಂ ನಿಮಿಷಂಗಳಾಗಿ ಪದ್ಮಾವತಿ ಸಂಪನ್ನೆಯಾಗಿ ನಿಚ್ಚಂ ಸಾಸಿರಹೊನ್ನೆಂದು ನೂರುಂ ಬಸಕ್ಕೆ ತಂದೆ ಮಡಗಿದ ಧನಂ ಹತ್ತು ಬರಿಸಕ್ಕೈದದಿರೆ ಧನಂ ತೀರೆ ಮನಂ ತೀರದಿರೆ ಮುಡಿದ ಹೂವಗಲ್ದೊಡಂ ಹಿಡಿದ ಪರಿಮಳವಗಲದಿರ್ಪಂತೆ ಸ್ನೇಹರಸ ಮಾಱದೆ ಸಮಸುಖಸಾರಹೃದಯಸಂಜಾತಹರ್ಷರಾಗಿ ಮಲುಹಣನುಂ ಮಲುಹಣಿಯುಂ ಪರಮಾನುರಾಗದೊಳಗಲದಿರೆ ಮೆಲ್ಲಮೆಲ್ಲನೆ ಪಲವು ದಿನಕ್ಕೆ ಬರ್ಪ ಪೊನ್ನಿನ ಉರವಣಿಯುಡುಗೆ ಉಚಿತವ್ಯಯಕ್ಕೆ ಆಪದ್ಧನವಿಲ್ಲದಿರೆ ಪದ್ಮಾವತಿ ಬೆಚ್ಚಿ ಬೆದರಿ ಎಚ್ಚರಂಗೊಂಡರ್ಥದ ಸವಿಗೆ ಮನಮುಂ ನಾಲಗೆಯುಂ ಲವಲವಿಸಿ ಮಿಕ್ಕು ಮೀಱಿದ ರಕ್ಕಸಿಗುಂಟಣಿ ಚೂತಮನಪ್ಪಿದ ಮಲ್ಲಿಕಾಲತೆಯನಗಲ್ಚುವ ಬಿಱುಗಾಳಿಯಂತೆ ಭೇರುಂಡವಕ್ಕಿಯ ನಡುವಂ ಸೀಳಲೊಯ್ವ ಲುಬ್ಧಕನಂತೆ ಮಗಳನಗಲ್ಚಲ್ ಬಗೆದು ಏಕಾಂತಮುಂಟೆಂದು ವಿಳಾಸಿನಿಯರಂ ಕಳುಪೆ ಬಂದ ಸಖಿಯರವರೀರ್ವರಿರವಂ ಕಂಡು ಕರೆಯ

ಲಾಱದೆ ಪೋಗಲುಂ ಮೀಱಲುಂ ಅಱಿಯದೆ ತಳುವಿತಂ ಕಂಡು ಸಿಡಿಮಿಡಿ ಗೊಳುತ್ತುಮಿರೆ ತಾನೆ ಬಂದುರವಣಿಸಿ ನುಡಿದೆಲ್ಲರಂ ಜಱಿದು ಝುಂಕಿಸಿ ಏಳೇಳ್ ಮಗಳೆ ನಿಮ್ಮ ಮಾವಂ ದ್ವೀಪಾಂತರದಿಂ ದಿವ್ಯ ವಸ್ತ್ರಾಭರಣಂಗಳಂ ಕೊಂಡು ಬಂದನವನ ನೋಡಲ್ಕೆ ಏಳೇಳ್ ಮಗಳೆ-ಎಂಬ ನುಡಿ ಕಿವಿ ಯೊಳಂಬಂ ಹೊಸೆದಂತಾಗೆ ಅಂತಃಕರಣದೊಳ್ ಹೊತ್ತಿದ ಕಾಮಗಿಚ್ಚಿನ ತಿದಿಯೊತ್ತಿದಂತೆ ಕಿಡಿ ಸೂಸೆ ಸುಯ್ದು ಕೋಪಂ ಸೂಸಲಱಿದು ಹರಣಂ ಹಾರೆ ಹಮ್ಮಯಿಸುತ್ತೆಂತಕ್ಕೆ ಸಂತಯಿಸಿಕೊಳ್ಳಲಾಱದೆ ಈ ರಕ್ಕಸಿಯ ನುಡಿ ಯೆದೆಗಿಚ್ಚಂ ನಂದಿಸಿ ಬರ್ಪೆ ನಂಜದಿರೆಂಬಂತೆ ಮಲುಹಣನಂ ದಯಾದೃಷ್ಟಿ ಯಿಂ ನೋಡಿ ಹಂಸೆಯಂಬುಗೀಡಾಗಿ ಬೀಳ್ವಂತೆ ಮಂಚದಿಂ ಕೆಳಕ್ಕೆ ಬೀಳ್ವ ಮಲುಹಣೆಯಂ ಸಖಿಯರ್ ಕಯ್ಯಾಂತು ಪಿಡಿಯಲಂತಂತು ತರಹರಿಸಿ ನೊಸಲಕಣ್ಣಹೊಗೆ ಸುತ್ತಿದ ಪೂಸರದಂತೆ ಕೆಳದಿಯರ ಕೆಯ್ಯೊಳ್ ಮೆಯ್ಯನೀಡಾಡೆ

ಮೆಲ್ಲಮೆಲ್ಲನೆ ಬಂದು ತಾಯುಂ ನೋಡಿ ಕೆಯ್ಯಂ ನೀಡಿ ಎಲೆ ಪಾಪಿ ಎಲೆ ಸುಖವೈರಿ ಕರೆದ ಕಾರಣವೇನೆಂದು ಬೆಸಗೊಳ್ವುದುಂ ಎಲೆ ಮರುಳ್ ಮಗಳೇ ಅರ್ಥಂ ತೀರ್ದುದು ಜವ್ವನಂ ಸೋರ್ದುದು ಇನ್ನೀ ಮಲುಹಣನಂ ಬಿಡು ಬಿಡೆಂದು ನುಡಿಯೆ ಸಿಡಿಲದನಿಗೇಳ್ದ ಹಂಸೆಯಂತೆ ನಡನಡನೆ ನಡುಗಿ ಎಲೆ ತಾಯೆ ಕಮಲತಂಡುಲಮನಾರೋಗಿಪ ಹಂಸೆಗೆ ಹರಳನಿಕ್ಕುವರೆ ಕೋರಕಮಂ ಸವಿವ ಕೋಕಿಲೆಗೆ ಕೊರಡನಿಕ್ಕುವರೆ ಬೆಳ್ದಿಂಗಳನಾಸ್ವಾದಿಪ ಚಕೋರಿಗೆ ಬಿಸಿಲಂ ಮಾಳ್ಪರೆ ಪರಿಮಳವನುಣ್ಬ ತುಂಬಿಗೆ ಹೊಗೆಯನಿಕ್ಕು ವರೆ ಪಳರಸವನೀಂಟುವರಗಿಳಿಗೆ ಕಾದನೀರೆರೆವರೆ ಮಲುಹಣನೊಳಭೇದ ಸುಖದೊಳಿರ್ಪೆನ್ನೊಡನಿಂತು ಮಾತಂ ನುಡಿವರೆ ಲೋಭ ಮೂರ್ತಾಗಿ ಹುಟ್ಟಿದ ದೀನೆ ಸುಖಮಂ ಕೊಯ್ವ ಮಾನಸಗರಗಸವೆ ಅಯ್ಯೋ ಏಕೆನ್ನನಱ ದಱಿದು ಸುಟ್ಟಪೆ ಇಱಿದಿಱಿದು ಬಿಸುಟಪೆ ದಾಕ್ಷಿಣ್ಯದಹನೆ ಪೋಗು ಪೋ ಗೆಂದು ಭೋಂಕನೆ ತಿರುಗಿ ಮಲುಹಣನೊಳ್ ನೇಹಸುಖಸುಪ್ತಿಯಿಂದಿರ್ಪ ಮಗಳ ಮೋಹಕ್ಕೆ ಪದ್ಮಾವತಿ ಬೆಱಗಾಗಿ ಕೆಯ್ಯರ್ಥಮಂ ಸೆಳೆದುಕೊಂಡಂತೆ

ಮಮ್ಮಲಂ ಮಱುಗಿ ಮಗಳ ದಾಕ್ಷಿಣ್ಯಕ್ಕೆ ಮತ್ತಂ ಕೆಲವು ದಿನಮಿರಿಸಿ ಸೈರಿಸಲಾಱದೆ ಮಲುಹಣಿಯನೆಂದಂದಿಗೆ ಕರೆಕರೆದಗಲ್ಕೆಯನಭ್ಯಾಸಂ ಮಾಡಿ ಮಲುಹಣನಂ ಸೆಜ್ಜೆಯೊಳ್ ಮೂದಲಿಸಿ ಕುಳ್ಳಿರ್ದೆಡೆಯೊಳ್ ಕುಸುಱಿದಱಿದು ನಿಂದಿರ್ದೆಡೆಯೊಳ್ ನೀರಂ ಚೆಲ್ಲಿ ಮನೆಯ ಮುಂದೆ ಸುಳಿವ ಹೊಸ ಹರೆಯದ ಸಂಪನ್ನರಪ್ಪ ರಾಜಪುತ್ರರುಟ್ಟುಡುಗೆಯಂ ತೊಟ್ಟ ತೊಡಿಗೆಯಂ ಕಂಡು ಸೈರಿಸಲಾಱದೆ ಮನಂ ಮಱುಗಿ ಔಡಂ ಕಚ್ಚಿ ವಿಳಾಸಿನಿಯರುಂ ನಿಃಕಾರಣಂ ಬಡಿದು ಕಾಳ್ಗಗಳಮಂ ತೆಗೆದು ಬೇನೆ ಇಲ್ಲದೆ ನರಳ್ದು ಸಾವಿಲ್ಲದೆ ಶೋಕಂಗೈದು ಬಱಿ ಸಾಲಕ್ಕೆ ಪುಸಿದಗಹಂ ಕೊಟ್ಟು ಮಲುಹಣನಂ ಮನೆಯಿಂ ಪೊಱಮಡಿಸಿ ನಿಶ್ಚಲನಂ ನಿಃಕರಿಸಿ ಸಸ್ವನಸಿದಿಗೊರ್ಳಲೆಂದು ಪದ್ಮಾವತಿ ಮಲುಹಣಿಯುಂ ಮಲುಹಣನ ವಿರಹಸಂತಪ್ತಚಿತ್ತೆಯುಂ ತಿಳಿಸಿ ಬೋಧಿಸುತ್ತುಮಿರೆಯಿರೆ

# ತೃತೀಯಸ್ಥಲ

ಕಂದ ||   ಪೊಱಮಡಿಸೆ ಮಲುಹಣಂ ನೆಱೆ
ಮಱುಗಿ ಮನಂಗುಂದಿ ಕಂದಿ ಮನ್ಮಥಬಾಣಂ
ಮಱುಮೊನೆಗಂಡಂತದಱೊಳ್-
ಗೆಱಗಿ ಕರಂ ತನುವನುರುಪಿ ಪೊರಳುತ್ತಿರ್ದಂ ||

## ರಗಳೆ

ಇಂತು ಮಲುಹಣನಂಗಜಾಗ್ನಿಯೊಳ್ ಬೇವುತುಂ
ಸಂತತಂ ಮಲುಹಣಿಯ ಮೋಹದೊಳ್ ಪೊರಳುತುಂ
ಪೊಱಮಡಿಸೆ ಪೋಗಲಾಱದೆ ಮನೆಯ ಮುಂದಿರ್ದು
ಮಱುಗಿ ಮನವುಕ್ಕಿ ತಲೆಗರೆದು ತಾಪಿಸುತಿರ್ದು
ನಡೆದು ಗಳಗಳನೆ ಪೋಪಂ ಕಾರ್ಯವಿನಿತಿಲ್ಲ
ನುಡಿವನೊರ್ವರ್ಗೆ ತನ್ನಂ ನುಡಿಸುವವರಿಲ್ಲ
ಸುಮ್ಮನಿರ್ಪಂ ಧ್ಯಾನವೆಳ್ಳನಿತು ತನಗಿಲ್ಲ
ನೆಮ್ಮಿ ಕುಳ್ಳಿರ್ಪನನುಸಂಧಾನವಿನಿತಿಲ್ಲ
ನಿಂದರಂ ಕಂಡು ಮಲುಹಣಿ ಎನುತೆ ಸೋಂಕುವಂ
ಬಂದರಂ ಕಂಡು ಮಲುಹಣಿ ಎನುತ್ತಪ್ಪುವಂ
ದಾರಿಯೊಳ್ ಬೀದಿಯೊಳ್ ಮಲುಹಣಿಯ ಕಳವಳಂ

ಕೇರಿಕೇರಿಗಳೊಳಗೆ ಮಲುಹಣಿಯು ಕಳವಳಂ
ನಿಂದಿರ್ದು ಕುಳ್ಳಿರ್ದು ನಡೆನಡೆದು ಬೆಚ್ಚುವಂ
ಮುಂದಿರ್ದರಂ ಕಂಡು ಬಂದಂತೆ ಹೆಚ್ಚುವಂ
ಭಾವರತಿಯೊಳ್ ಕೂಡಿ ಕಣ್ಮುಚ್ಚಿ ಕರಗುವಂ
ಭಾವದಚ್ಚಳಿಯೆ ಕಣ್ದೆಱೆದಱಿಸಿ ತಿರುಗುವಂ
ತನುವೆತ್ತಿ ಪೊಱಪೊಳಲ ಬನದೊಳಗೆ ಪರಿದಲ್ಲಿ
ತನತನಗೆ ತೀವಿರ್ದ ಪೂಗೊಳನ ತಡಿಯಲ್ಲಿ
ಕಮಳಮಂ ಮಲುಹಣಿಯು ಮೊಗವೆಂದು ಮುಟ್ಟುವಂ
ಕುಮುದಮಂ ಕಣ್ಗಳೆಂದಕ್ಷಿಯೊಳಗೊತ್ತುವಂ
ಮಧುಕರಂಗಳನಳಕವೆಂದು ತಲೆಯೊತ್ತುವಂ
ಅಧರವೆಂದಾ ಬಿಂಬಫಳಮನಜ್ಜೊತ್ತುವಂ
ದಾವಾಗ್ನಿಯೆಂದಶೋಕೆಯನಱದು ಹೆಱಸಾರ್ದು
ಪೂವನಂಗಜಬಾಣವೆಂದು ಕಂಡೊಳಸಾರ್ದು
ಬಿಸಿಯ ಬೆಳಗೆಂದು ಬೆಳ್ದಿಂಗಳಿಗೆ ಹೇಡೈಸಿ
ಪಸಿಯ ಕಿಚ್ಚೆಂದು ಪೊಸ ಪಲ್ಲವಕೆ ತಲ್ಲಣಿಸಿ
ಓಡಿಬಂದೂರೊಳಗೆ ಹಳಹಳಿಸುತಂ ಪೊಕ್ಕು
ಬಾಡಿ ಬಸವಳಿದು ಮಲುಹಣಿಯು ವಿರಹಂ ಮಿಕ್ಕು
ಗಳಗಳನೆ ನಾಲ್ಕೈದವಸ್ಥೆ ದೇಹದೊಳೇಱೆ
ಒಳಗೊಳಗು ಸುಡಲೊಳಗು ಪೊಱಗೆಲ್ಲ ಕಾಹೇಱೆ
ನೈಸೋಂಕೆ ಮೆಲ್ಗಾಳಿ ಘುರಿಘುರಿಲನುರಿದಪ್ಪುದು
ಕೈ ಸೋಂಕೆ ಬೆಳ್ದಿಂಗಳಗ್ಗಳಂ ಕಾದಪ್ಪುದು
ಹೊಕ್ಕ ಕೊಳನುಕ್ಕಿ ನೆಱೆ ಬತ್ತಿ ಬಱದಾದಪ್ಪುದು
ಮಿಕ್ಕು ಮುಟ್ಟಿದ ಪಲ್ಲವಂಗಳುಱೆ ಸೀದಪ್ಪುವು
ಎಂಬ ವಿರಹದ ತಾಪಕಿರಲಾಱದೆಯ್ತಂದು
ಇಂಬಿಲ್ಲದಾತುರಂ ತಲೆಗೇಱೆ ಪರಿತಂದು

ಮಲುಹಣಿಯ ಮನೆಯ ಮುಂದಲ್ಲಲ್ಲಿ ನಿಂದಿರ್ದು
ಮಲುಹಣಂ ಮತಿಗೆಟ್ಟು ಕಳವಳಿಸುತುಂ ಸಾರ್ದು
ಉರವಣೆಯ ಕರಣಂಗಳೊಡಗೂಡಿ ತಾಪಿಸುತೆ
ತಿರುಗಿ ಮಲುಹಣಿ ಮಲುಹಣೀ ಎಂದು ಮೂರ್ಛಿಸುತೆ
ತನ್ನಿಂದ ತಾನೆ ಮತ್ತೆಚ್ಚತ್ತು ನೋಡುತ್ತ
ಉನ್ನತಾನಂಗಶಿಖಿಯಿಂದುರಿದು ಬೇವುತ್ತ
ನಡೆತಂದು ಮಲುಹಣಿಯ ಬಾಗಿಲೊಳ್ ಬಳಲುತುಂ
ಅಡಿಗಡಿಗೆ ಘನತಾಪವೆಡೆಗೊಂಡು ಕಳಲುತುಂ
ದೂಱಿಸುತೆ ತಾಪಿಸುತೆ ತಾ ಭಿತ್ತಿಯಂ ನೆಮ್ಮಿ
ಹಾರುತುಂ ಕಣ್ಮುಚ್ಚಿ ಕೊರಗಿ ವಿರಹಂ ಪೊಣ್ಮಿ
ಮಲುಹಣಿಯಂನಿರೀಕ್ಷಿಸಿದ ಕಣ್ಗೆ ತಣ್ಪಾಗುತುಂ
ಮಲುಹಣಿಯ ದನಿಗೇಳ್ದ ಕಿವಿಗೆ ಸೊಗಸಾಗುತುಂ
ಕೆಳದಿಯರ್ ಪೊಱಮಡಲು ಚರಣದೊಳ್ ಪೊರಳುತುಂ
ಅಳವಲ್ಲದುರವಣೆಯ ತಾಪದೊಳು ಕೆರಳುತುಂ
ಮನದೊಳಗೆ ಕಣ್ಣೊಳಗೆ ಮಲುಹಣಿಯ ಕಳವಳಂ
ತನುವಿನೊಳ್ ತವಕದೊಳ್ ಮಲುಹಣಿಯ ಕಳವಳಂ
ಬಂದೆಂಜಲಂ ಚೆಲ್ಲುವೊಂದು ಹೊಸಕುಳಿಯೊಳಗೆ
ನಿಂದು ಮಧ್ಯಮರಾತ್ರಿಪರ್ಯಂತವದಱೊಳಗೆ
ಇರಲಲ್ಲಿ ಮಲುಹಣೀದೇವಿಯಾರೋಗಿಸಿದ
ಪರಿಯಾಣಮುಮನೊರ್ಬ ಹೊಸ ವಿಳಾಸಿನಿ ತೊಳೆದ
ಉದಕಮುಂ ಚೆಲ್ಲಲಾತನ ಮೇಲೆ ಪಸರಿಸಲ್
ಪಡೆದು ಪುಳಕಪ್ರತತಿ ತನ್ನ ಮೆಯ್ಯೊಳ್ನಿಲಲ್
ಹಾ ಮಲುಹಣೀ ಮಲುಹಣೀ ಎಂದು ಹಾರೈಸೆ
ಆ ಮಾತು ಮಲುಹಣಿಯ ಕಿವಿಗಳೊಳ್ ಪೂರಯಿಸೆ

ಮಲುಹಣನ ದನಿಯೆಂದು ಗಳಗಳನೆ ನಡೆತಂದು
ಮಲುಹಣ ಇದೇಕಿಂತು ನಿಲ್ವರೇ ನೀನೆಂದು
ಕೆಟ್ಟೆ ನೀನೇಕಿಲ್ಲಿ ನಿಂದಿರ್ಪೆ ಪೋಗೆನುತೆ
ಮುಟ್ಟೆ ಕೈಗೊಡಹಿ ಕಡು ವಿರಹಕ್ಕೆ ಕಂಪಿಸುತೆ
ಹೋಗಲುರಿಯೊಳಗೆ ತುಪ್ಪವನೆಱೆದ ತೆಱನಾಗೆ
ಪೂಗಣೆಗಳಿಟ್ಟಣಿಸಿ ಮುಸುಱೆ ಮನಮಂ ತಾಗೆ
ಮತ್ತೆ ವಿರಹಂ ನೆಗೆದು ಕರಣದೊಳ್ ನೂರ್ಮಡಿಸೆ
ಹೊತ್ತಿ ಹೊಗೆಯಿಲ್ಲದೊಳಗುರಿ ಪರಿದು ನೂರ್ಮಡಿಸೆ
ನಿಂದಿರ್ದನಿರ್ದನಿರ್ದಂ ಮಹಾ ನಿಶೆಯೊಳಗೆ
ಸಂದಣಿಸಿ ಮಂದೈಸಿ ಕವಿವ ಹೊಸ ಹಿಮದೊಳಗೆ
ಇರೆ ಕಱೆದುದತಿ ನೂತ್ನ ಶೀತವಾತನ ಮೇಲೆ
ಪರಿಪರಿಯ ಹೊಸ ಹಿಮದ ಘಟ್ಟಯಾತನ ಮೇಲೆ
ಮುಚ್ಚಿ ಮುಸುಕಲು ನಡುವೆ ಮಲುಹಣಂ ನಿಂದಿರ್ದ-
ನಚ್ಚರಿಯ ವಿರಹದಿಂ ಹಿಮದೊಳಗೆ ಸಂದಿರ್ದ
ಎಳೆಯ ಬೆಳ್ಮುಗಿಲೊಳಗೆ ಹೊಳೆವ ಪಾವಕನಂತೆ
ಹೊಳೆವಾಲಿಕಲ್ಲ ಮನೆಯೊಳಗಿರ್ಪ ರವಿಯಂತೆ
ಬಿಟ್ಟೆಸಲ್ ಕಣ್ಮುಚ್ಚಿ ಹೊಯ್ವ ಶೀತದ ನಡುವೆ
ಮುಟ್ಟಿದೊಡೆ ಕೈಕಡಿದು ಬೀಳ್ವ ತುಹಿನದ ನಡುವೆ
ನೆನೆದೊಡೆ ಮನಂ ಮುರುಂಟುವ ಶೀತಳದ ನಡುವೆ
ತನು ಕರಗಿ ಕೋಡಿಸುವ ಬಹಳ ಶೀತದ ನಡುವೆ
ಕೊಲುವ ಹಿಮವಾತಂಗೆ ಶಿಶಿರೋಪಚಾರವದು
ಒಲಿವ ಬೇಗೆಯು ಬೆಂಕಿಗೊಂಡಲೆವ ಶೀತವದು
ತಾನಾಗೆ ಹಿಮದ ಗೂಡಾರದೊಳಗಿರ್ಪಂತೆ
ನಾನಾ ಹಿಮೋಪಚಾರದ ಹಿಮಗೃಹದಂತೆ
ಬೆಳಗಪ್ಪಿನಂ ಶೀತಳಾಲಯದೊಳೊಪ್ಪಿರಲ್
ಬೆಳಗಾಗೆ ಮಲುಹಣಿಯು ಕಣ್ಗೆ ಪೊಸತಾಗಿರಲ್

ಕೆಂತು ಮಲುಹಣೆಯಿದೇಂ ಹಿಮಪ್ರೊಟ್ಟಳೇಕಿಲ್ಲಿ
ಕಂಡೆ ನಾನಿರುಳಿರ್ದ ಮಲುಹಣಂ ತಾನಿಲ್ಲಿ
ಅಕಟಕಟ ಮಲುಹಣಂ ಹಿಮದೊಳ್ ಮುಱುಂಟಿದಂ
ಅಕಟಕಟ ಪಾಪಿಯೆನಗೊಲ್ದು ನೆಱೆ ಮಳ್ಗಿದಂ
ಪಾಪಿಯಾದೆಂ ಪಾಪಿಯಾದೆನೆಂದೆನುತಲ್ಲಿ
ತಾಪಿಸುತ್ತಂ ಪರಿಚ್ಛೇದಿಸುತ್ತಂತಲ್ಲಿ
ಅಱಿವಳಿದು ಕಳೆಗುಂದಿ ಮನನೊಂದು ಮಱುಗುತುಂ
ಮಱವೆ ಬೇರೂಱಿ ತನ್ನೊಳು ತನ್ನನಱಸುತುಂ
ಎಚ್ಚರಿಕೆಯೊತ್ತೊತ್ತಿನೊಳು ಬೆಚ್ಚಿ ಬೆಮರುತುಂ
ಅಚ್ಚಸುಖಸಮರತಿಗಳೊಳಗೆ [ತನು] ಕರಗುತುಂ
ಸತ್ತೊಡನೆ ಮರಣವಿದು ತಪ್ಪದೆನುತುಂ ಬಂದು
ಸುತ್ತುಮುತ್ತಿರ್ದ ಸತಿಯರು ಸಂದಣಿಸಿ ನಿಂದು
ತೆಗೆ ಹಿಮವನೆಂದು ಮರವುಟ್ಟನಿಂ ತೆಗೆಯಿಸಲ್
ಮೊಗೆದು ಕೆಲಬಲಕಿಕ್ಕಿಸುತ್ತುಂ ನಿವಾರಿಸಲ್
ಕಪಟವಳಿದೊಳಗೊಪ್ಪುವನುರಾಗವಿರ್ಪಂತೆ
ಉಪಚಾರವಳಿದು ಸತ್ಯಸ್ನೇಹವಿರ್ಪಂತೆ
ಇರ್ದನಾ ಮಲುಹಣಂ ವಿರಹಕ್ಕೆ ತೆಱಪಾಗಿ
ಇರ್ದನಾ ಮಲುಹಣಂ ತಾಪಕ್ಕೆ ತಂಪಾಗಿ

ಇರೆ ಕಂಡು ಮಲುಹಣೆ ಮನಂ ಮಱುಗಿ ಬೆಱಗಾಗಿ
ಉರಿವರಿವ ವಿರಹದುರವಣೆಗೆ ಕಲ್ಮರನಾಗಿ
ಮಲುಹಣನನಳ್ಕರಿಂ ಕರುಣದಿಂದಂ ನೋಡಿ
ಮಲುಹಣೆ ಮನೋದುಃಖದಿಂದೆ ನುಡಿದಳ್ ಬಾಡಿ
ಎನ್ನಮೇಲಿಕ್ಕುವೀ ಚಿತ್ತದಾತುರತೆಯಂ
ಪನ್ನಗಾಭರಣನೊಳ್ ಮಾಳ್ಪುದೆನ್ನೊಲ್ಮೆಯಂ
ಎಂದ ಮಾತಂ ಕೇಳ್ದು ಬಳಿಕ ನೀನೆನಗಪ್ಪೆ

ಇಂದುಧರನಂ ಬೇಡು ನಿನ್ನತ್ತ ನಾಂ ಬಪ್ಪೆ
ಎನ್ನ ಹವಣೇ ಕೋಟಿ ಮಲುಹಣಿಯರಾಗರೇ
ಮನಸಿಜಾರಿಯನಱಿದು ದುಃಖಮಂ ನೀಗರೇ
ಬೇಡಿಕೊಳ್ಳೀಶ್ವರನೊಳಿನ್ನ ಮಲುಹಣ ಪೋಗು
ನೋಡಬಾರದು ವಿರಹದನುತಾಪಮಂ ನೀಗು
ಎನೆ ವಿರಹಮಂ ತೆಗೆದು ಹರನ ಮೇಲಿಕ್ಕಿದಂ
ತನಿನೇಹಮಂ ಶಿವನ ಮೆಲ್ಲಡಿಗೆ ಸಾರ್ಚಿದಂ

## ೪

# ರಾಘವಾಂಕ

## ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ !

ಧರೆ ಬಿರಿಯಲಳ್ಳಿಱೀವನಂತ ನಿಸ್ಸಾಳದ-
ಬ್ಬರವನಾಲಿಸಿ ಪುರದ ಕೇರಿಗಳನೊಪ್ಪೆ ಸಿಂ-
ಗರಿಸಿ ಮನೆಮನೆಗಳೊಳು ಗುಡಿತೋರಣಂಗಳಂ
ಸರದೆಗೆದು ಸಂಭ್ರಮದಲಿ
ಅರರೆ ಕೋಟಾಕೋಟಿ ಕರಿತುರಗರಥಪತ್ತಿ
ಪರಿಜನಂಬೆರಸಿ ಮತ್ತಾ ಹರಿಶ್ಚಂದ್ರ ಭೂ-
ವರನನಿದಿರ್ಗೊಳಲು ನಡೆದರು ಶಶಿಯನಿದಿರ್ಗೊಂಡು
ಹೆಚ್ಚುವಂಭೋಧಿಯಂತೆ ॥ ೧

ಮುತ್ತಿ ಮುಸುಕಿದ ಹಲವು ಕೈದುಗಳ ಝಲ್ಲರಿಗ-
ಳೊತ್ತಿನೊಳು ತಳಿತ ಬೆಳುಗೊಡೆಗಳಿಡುಕುಱಿ ನೆಳಲ
ಕುತ್ತುಱೊಳು ಪಾಲಿಸುವ ಚಮರಿ ಸೀಗುರಿಗಳೊಗ್ಗಿನ
ಕುಱುಹುವಿಡಿದು ನಡೆದು
ಎತ್ತಿದ ಮೊಗಂ ನಿಲುಕಿ ನೋಳ್ಪ ಕಂಗಳು ಮುಗಿದು
ಜೊತ್ತ ಕೈಯುವಧಾರು ಜೀಯ ಎಂದೆಂಬ ನುಡಿ-
ನೆತ್ತು ಹತ್ತಿರೆ ಬಂದು ಮುನಿಯು ಮೊಗವಂ ಕಂಡ
ಕೊತ್ತನಿನ್ನೇವೊಗಳ್ವೆನು ॥ ೨

ನಸುನನೆಯನಪ್ಪಿದಳಿಕುಳದಂತೆ ಕಡು ಹಸಿದು
ಕಸುಗಾಯನಗಿದ ಗಿಳಿಗಳ ಬಳಗದಂತೆ ನಿ-
ಟ್ಟಿಸದೆ ವಿಷಮಂ ಸವಿದ ಶಿಶುವಿಸರದಂತೆ
ಕೊರಡಂ ಕರ್ದುಕಿ ಚಂಚುನೊಂದು
ಕುಸಿದ ಪಿಕನಿಕರದಂತಾಸತ್ತು ಬೇಸತ್ತು
ಬಸವಳಿಯುತಂದು ಮಂದಿಗಳೊಳಱಿಸಿದರು ಮಾ-
ಮಸಕದಿಂ ಪುರಜನಂ ಭೂಪನಂ ಹೊಲಗೆಟ್ಟ
ಕಱು ತಾಯನಱಿಸುವಂತೆ ‖ ೩

ಹಗಲೊಗೆದ ಚಂದ್ರಕಳೆಯಂತೆ ಬಿಱುವೈಶಾಖ-
ವಗಿದ ಬನದಂತೆ ಬಿಸಿಲೊಳು ಜಿಸುಟ ತಳಿರಂತೆ
`ಮೊಗ ಕಂದಿ ಕಳೆಗುಂದಿಯಱುವೆಗಪ್ಪಡವುಟ್ಟು
ರಾಗವಳಿದೊಪ್ಪಗೆಟ್ಟು
ಮಗನರಸಿಮಂತ್ರಿಸಹಿತವನಿಪಂ ಹಿಂದೆ ದೇ
ಸಿಗನಂತೆ ಕೌಶಿಕನ ಕಾಹಿನೊಳು ಬರೆ ಕಂಡು
ಬಗೆ ಬೆದಱ ಹೊದ್ದಿ ಹೊಡವಟ್ಟು ಕಾಣಿಕೆಯ
ಚಿತ್ತೈಸು ಭೂಭುಜ ಎಂದರು ‖ ೪

ಎನಗರಸುತನ ಮಾದು ಹೋಗಿ ವಿಶ್ವಾಮಿತ್ರ
ಮುನಿಗಾದುದಾತನಂ ಕಂಡು ಕಾಣಿಕೆಯನಿ-
ತ್ತನುದಿನಂ ಬೆಸಕೈವುದೆನಲೊಲ್ಲೆವೆನಲು
ಬೋಧಿಸಿ ಬಲಾತ್ಕಾರದಿಂದ
ಜನವ ಕಾಣಿಸಿ ಕಾಣಿಕೆಯ ಕೊಡಿಸಿ ಹಿಂದುಗೊಂ-
ಡಿನಕುಲಲಲಾಮನೆಯ್ತಂದು ಪುರವಂ ಹೊಕ್ಕು
ಮನದೊಳುತ್ಸವದ ಹೆಚ್ಚುಗೆಯಳಿದು ನಿಂದ
ಮಂದಿಯನೋಡುತಂ ನಡೆದನು ‖ ೫

ಗೊಂದಣಂ ಮಿಗೆ ಹರಸಲೆಂದಾರತಿಯನೆತ್ತ-
ಲೆಂದು ಸೇಸೆಯನಿಕ್ಕಲೆಂದಾರ್ತದಿಂ ನೋಡ-
ಲೆಂದು ರೂಪಂ ಮೆಱೆಯಲೆಂದು ಸೊಬಗಂ
ಸಾಱಲೆಂದು ನವರತ್ನವಿಡಿದು
ಹೊಂದೊಡಿಗೆಯಂ ತೋಱಲೆಂದು ಜನದಳವಱಿಯ-
ಲೆಂದು ಬೀದಿಯೊಳು ಬಾಗಿಲೊಳು ಭದ್ರಂಗಳೊಳು
ನಿಂದ ಸತಿಯರು ಭೂಪನಿರವ ಕಂಡುರಿಹೊಯ್ದ
ಹೊಗಣೆಗಳಂತಿರ್ದರು || ೬

ನೂಕಿ ನಡೆದರಮನೆಯ ಹೊಕ್ಕು ಸಿಂಹಾಸನ-
ಕ್ಕಾ ಕೌಶಿಕಂ ಬಂದು ಭೂಭುಜನ ಕೈಯ ಪಿಡಿ-
ದೀ ಕಟಕವೀ ಕೋಟೆಯೀ ಕರಿಗಳೀ ತುರಗವೀ
ರಥಗಳೀ ಪರಿಜನ
ಈ ಕೋಶವೀ ಕಾಂತೆಯೀ ಕುವರನೀ ಮಂತ್ರಿ-
ಯೀ ಕಾಮಿನೀಜನಂ ಮಱುಗದಂತರಸಾಗ-
ಬೇಕಾದಡೆನ್ನ ಮಕ್ಕಳ ಮದುವೆಯಾಗು
ಕಾಡದೆ ಬಿಟ್ಟು ಹೋಹೆನೆಂದ || ೭

ಹೆತ್ತ ತಾಯಂ ಮಾಱಿ ತೊತ್ತ ಕೊಂಬರೆ ಮೂಗ-
ನಿತ್ತು ಕನ್ನಡಿಯ ನೋಡುವರೆ ಮಾಣಿಕದೊಡವ-
ನೊತ್ತೆಯಿಟ್ಟೊಡೆದ ಗಾಜಂ ಹಿಡಿವರೇ ಕೋಪದಿಂ
ಸತ್ತು ಮದುವೆಯಹರೇ
ಕತ್ತುರಿಯ ಸುಟ್ಟರಳ ಕುಱುಕಲನ ಗೆಯ್ವರೇ
ಚಿತ್ತೈಸು ಹೊಲತಿಯರ ನೆರೆದು ನಾನೋವದಿ-
ಪ್ಪತ್ತೊಂದು ತಲೆವೆರಸಿ ನರಕಕ್ಕೆ ಹೋಹೆನೇ
ಮುನಿನಾಥ ಹೇಳೆಂದನು || ೮

ಒಲ್ಲದಿರಬೇಡ ಲೇಸೊಲ್ಲೆಯೇಕೊಲ್ಲೆಯೆ-
ಮ್ಮಲ್ಲಿ ತಪ್ಪಿಲ್ಲಾದಡಿನ್ನು ನೀನೀಗ ನಿನ-
ಗುಳ್ಳ ಪರಿವಾರಮಂ ಕರಸು ಬೇಗದಲಿಂತು
ಚತುರಂಗಬಲ ಸೇನೆಯ
ಸಲ್ಲಲಿತ ದೇಶಕೋಶವನು ಕಟಕವನವ-
ಕ್ಕುಳ್ಳ ಕುಲಕರಣ ದುರ್ಗಂ ಮುದ್ರೆ ಮೊದಲಾದು
ವೆಲ್ಲಮಂ ಬಿಡದೊಪ್ಪುಗೊಟ್ಟು ಹೋಗೇಳೆನಲು
ಕರಸಿದಂ ಭೂನಾಥನು || ೯

ಬಾಡಿದ ಮೊಗಂ ಬಱತ ಬಾಯ್ ಸುರಿವ ನಯನಾಂಬು
ಪಾಡಳಿದ ಮತಿ ನೀಡಿ ಬೆಳೆದ ಸುಯ್ ದುಗುಡುವ-
ಕ್ಕಾಡುವಂಗಂ ನಿರೋಧಾಗ್ನಿಯಿಂ ಕುದಿದು ಮಱುಗುವ
ಮನಂ ಮಾಸಿದ ಮುದಂ
ಕೂಡೆ ಬಂದಖಿಳ ಪರಿವಾರಮಂ ಸತಿಯುಮಂ
ನಾಡೆ ಚತುರಂಗಬಲವಂ ಪುರಜನಂಗಳಂ
ನೋಡಿ ತೋಱಿಸಿ ಬೇಱೆವೇಱೊಪ್ಪುಗೊಡುತಿರ್ದನಾ
ಧೈರ್ಯನಿಧಿ ಭೂಪನು || ೧೦

ಇದು ರತ್ನಭಂಡಾರವಿದು ಹೇಮಭಂಡಾರ-
ವಿದು ಸುನಾಣೆಯ ವರ್ಗವಿದು ಪಟ್ಟಕರ್ಮಕುಲ-
ವಿದು ಬೆಳ್ಳಿಯುಗ್ರಾಣವಿದು ಕಂಚಿನುಗ್ರಾಣವಿದು
ಸರ್ವ ಶಸ್ತ್ರಶಾಲೆ
ಇದು ಹಸ್ತಿಸಂದೋಹವಿದು ತುರಗಸಂತಾನ-
ವಿದು ವರೂಥಪ್ರಕರವಿದು ಪದಾತಿವ್ರಾತ-
ವಿದೆ ನೋಡಿಕೋ ಎನುತ್ತೊಪ್ಪಿಸಿದನಾ ಮುನಿಗೆ
ಭೂನಾಥಕಂದರ್ಪನು || ೧೧

ಹಿರಿಯ ಬಿರುದಿನ ಮುದ್ರೆಯಿದು ನಗರವಿದು ಪೂರ್ವ-
ಜರಮನೆಯಿದಖಿಳ ಪರಿವಾರವಿದು ಸಿವುಡಿಯಿದು
ಕರಣವಿದು ಮೇಲುಳ್ಳ ಸರ್ವಸ್ವವಿದು ನೋಡಿಕೋ
ಮಹಾಪುರುಷ ಎಂದು
ವರ ಕೌಶಿಕಂಗೊಪ್ಪುಗೊಟ್ಟಿಲ್ಲ ಸಂದುದೇ
ಪರಿಣಾಮವೇ ಇನ್ನು ಹೋಹೆನೇ ಮುನಿನಾಥ
ಕರುಣಿಸಿದಿರೇ ಎಂದು ಪೊಡವಂಟು ಹೋಹರಸ-
ನೊಡನೆದ್ದನಾ ಮುನಿಪನು ‖ ೧

ಪೊಱಮಡುವ ಭೂಪಾಲನಂ ಕಂಡು ಕಣ್ಗೆಟ್ಟು
ಮಱುಗಿ ಬಸುಱಾ ಹೊಸೆದು ಬಸವಳಿದು ಬಿಸುಸುಯ್ದು
ನೊಱೆಯಿಟ್ಟು ಬಾಯ್ಬಿಟ್ಟು ಕೈನೀಡಿ ಕರೆದು
ಕಟ್ಟೊಱಱಿ ಸೈರಿಸಲಾಱಿಸೆ
ಸೆಱೆ ನಿನ್ನ ನಂಬಿ ನಚ್ಚಿರ್ದ ಪರಿವಾರಮಂ
ಮಱೆದೆಯೋ ತೊಱೆದೆಯೋ ಮಾಱಿದೆಯೊ ಪೇಳ್ ನೇ-
ಸಱಕುಲಜ ಎಂದೆಂದು ನುಡಿನುಡಿದು ಮಿಡುಮಿಡನೆ
ಮಿಡುಕಿತ್ತು ಪೌರಜನವು ‖ ೧೩

ದಂತಿಯಿಂದಿಳಿದು ನಡೆದಱಿಯದವ ಬಱಿಗಾಲೊ-
ಳೆಂತಡಿಯನಿಡುವೆ ಹಾಸಿನೊಳು ಪವಡಿಸುವಾತ-
ನೆಂತು ಕಲುನೆಲದೊಳೊಱಗುವೆ ಸಿತಚ್ಛತ್ರತಂಪಿನೊಳು
ಬಪ್ಪಾತ ನೀನು
ಎಂತು ಬಿಱುಬಿಸಿಲನಾನುವೆ ಪುರದೊಳಿಪ್ಪಾತ-
ನೆಂತರಣ್ಯದೊಳಿಪ್ಪೆ ಜನವನಗಲ್ದಱಿಯದವ-
ನೆಂತು ಪೇಳೇಕಾಕಿಯಾಗಿಪ್ಪೆ ಎಂದು ಬಾಯ್ಬಿಟ್ಟುದು
ಸಮಸ್ತ ಜನವು ‖ ೧೪

ಹೊಱಗೆ ದಾನವ ಬೇಡುವವರುಂಟೆ ಕೊಟ್ಟು ಬೇ-
ಸಱಿನ ಮುಗುದರಸು ದೊರಕಿದನಲಾ ಎಂದು ಕ-
ಟ್ಟಱೆಗಂಡ ಪಾಪಿ ನಿಷ್ಕರುಣಿ ನಿರ್ದಯ ಮೂರ್ಖ
ನೀಚ ನೀರಸ ನಿರ್ಗುಣ
ನೆಱೆ ಕೊಂದೆ ನಂಬಿ ನಚ್ಚಿರ್ದರೆನ್ನೊಡಲೊಳ-
ಳ್ಳಿಱಿಯುತಿಪ್ಪಳಲ ಬೇಗೆಯ ಬೆಂಕಿಯುರಿ ನಿನ್ನ-
ನಿಱಿಯದೇ ಹೇಳು ವಿಶ್ವಾಮೃತ್ಯುವಾದೆ ವಿಶ್ವಾಮಿತ್ರ
ಎನುತಿರ್ದರು || ೧೫

ಜಡೆಗಳೆದು ಮಕುಟವಂ ನಾರಸೀರೆಯನು ತೊಱೆ-
ದುಡಿಗೆಯಂ ರುದ್ರಾಕ್ಷಮಾಲೆಯಂ ಕಳೆದು ಮಣಿ-
ದೊಡಿಗೆಯಂ ಕಂದಮೂಲವನೊಲ್ಲದೂಟವಂ
ದರ್ಭೆಯಂ ಬಿಟ್ಟಸಿಯನು
ಅಡವಿಯಂ ಬಿಟ್ಟು ನಗರಿಯ ಭಸಿತವಂ ಬಿಟ್ಟು
ಕಡು ಸುಗಂಧಂಗಳ ಜಿತೇಂದ್ರಿಯತ್ವವ ಬಿಟ್ಟು
ಮಡದಿಯರ ಜಗವಱಿಯೆ ಕೂಡಲು ವ್ರತಕ್ಕೆ ಮುಪ್ಪಾಯ್ತೆ
ಮುಪ್ಪಿನೊಳೆಂದರು || ೧೬

ಮಲೆತು ಬೆನ್ನಟ್ಟುವ ಮಹಾರಿಷಡುವರ್ಗಮಂ
ಗೆಲಲಱಿಯದವನಾವ ಹಗೆಗಳಂ ಗೆಲುವೆ ನಿ-
ನ್ನೊಳಗೆ ಕರಣವ ಸಂತವಿಡಲಱಿಯದವನಾವ
ದೇಶವಂ ಸಂತವಿಡುವೆ
ಸಲೆ ತಪಸ್ತೇಜದಿಂ ಪುರುಷಾರ್ಥಕೋಶಮಂ
ಬಳಸಲಱಿಯದನಾವ ತೇಜದಿಂ ಕೋಶಮಂ
ಬಳಸಿದಪೆ ಕಂಗೆಟ್ಟು ಕಡುಪಾಪಿ ಮೂರ್ಖ ಕೌಶಿಕ
ಕೇಳು ಕೇಳೆಂದರು || ೧೭

ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ
ಪರಿಜನದ ಭಾಗ್ಯವಡವಿಗೆ ನಡೆಯುತಿದೆ ಸಪ್ತ-
ಶರಧಿಪರಿವೃತಧರೆಯ ಸಿರಿಯ ಸೊಬಗಜ್ಞಾತವಾಸಕ್ಕೆ
ಪೋಗುತಿದೆ ಕೋ
ಎರೆವ ದೀನಾನಾಥರಾನಂದವಡಗುತಿದೆ
ವರ ಮುನೀಂದ್ರರ ಯಾಗರಕ್ಷೆ ಬಲವಳಿಯುತಿದೆ
ನಿರುತವೆಂದೊಂದಾಗಿ ಬಂದು ಸಂದಿಸಿ ನಿಂದ ಮಂದಿ
ನೆಱೆ ಮೊಱೆಯಿಟ್ಟುದು ॥ ೧೮

ವಸುಧೆ ಬಾಯ್ಬಿಡೆ ದೆಸೆಗಳಸವಳಿದು ಮಱುಗೆ ನಿ-
ಟ್ಟೆಸಲಾಱದಂಬರಂ ಕಂಬನಿಯನುಗುಳೆ ಶೋ-
ಕಿಸುವ ಪರಿಜನದಳಲನಾಱಿಸುತ ಪಾಲಿಸುತ
ಸರದೋಱಿ ಸಂತವಿಡುತ
ಮಸಗಿ ಪುರಮಂ ಮೀಱಿ ಹೋಗುತ್ತ ಹಿಂದೆ ಸಂ-
ದಿಸಿ ಬಪ್ಪ ಕೌಶಿಕನ ಕಂಡು ನಿಂದವನೀಶ-
ನೊಸೆದು ನಿಲಿಸುವ ಭರದೊಳೊಂದೆರಡು
ಮಾತನಾಡಿದನದೇವಣ್ಣಿಸುವೆನು ॥ ೧೯

ಹಿಂದೆ ರಾಜ್ಯಂಗೆಯ್ವ ಗರ್ವದಿಂ ಹೊಲತಿಯರ
ತಂದು ಕುಲವಂ ಕೆಡಿಸಲಾಱದಳಲಿಂ ನಿಮ್ಮ-
ನೊಂದೊಂದು ವಿಧದಿ ದಟ್ಟಿಸಿ ಜಱಿದು
ಮಾಱುತ್ತರಂಗೊಟ್ಟು ಕೆಟ್ಟನುಡಿದು
ನಿಂದೆಗೆಯ್ದನ್ಯಾಯ ಪಾಪಿ ಚಂಡಾಲನೆ-
ನ್ನಿಂದಧಮರಾರಯ್ಯ ಸರ್ವಾಪರಾಧಿಯಾಂ
ತಂದೆ ಕರುಣಂಗೆಡದಿರೆಂದು ಮುನಿಯಂ
ಬೇಡಿಕೊಂಡನು ಹರಿಶ್ಚಂದ್ರನು ॥ ೨೦

ಮನದೊಳಗೆ ಮಱುಗದಿರಿ ಚಿಂತಿಸದಿರಳಲದಿರಿ
ಮುನಿಯದಿರಿ ನೋಯದಿರಿ ಧೃತಿಗೆಡದಿರೀಗಳೆರ-
ಡನೆಯ ಶಿವನೆನಿಪ ಕೌಶಿಕನೊಡೆಯನಾದನಾತನ
ಪಾದಪಂಕಜಕ್ಕೆ
ಎನಗೆ ಬೆಸಕೈವಂತೆ ಬೆಸಕೈವುದಂಜುವುದು
ವಿನಯಮಂ ನುಡಿವುದೋಲೈಸುತಿಹುದೆಂದು ಪರಿ-
ಜನಕೆ ಕೈಮುಗಿದೆಯ್ದೆ ಬೇಡಿಕೊಂಡಂ ಧೈರ್ಯನಿಧಿ
ಹರಿಶ್ಚಂದ್ರನೃಪನು ॥ ೨೧

ಧರೆಗಧಿಕವೆನಿಪ ರವಿವಂಶದಿಕ್ಷ್ವಾಕು ಭೂ-
ವರನು ಮೊದಲನ್ವಯಾಗತವಾಗಿ ಬಂದುದೀ
ಪರಿವಾರವೀ ದೇಶವೀ ನಗರವಿಂದುತನಕಾವೆಡರು
ಬಡತನವನು
ನೆರೆದಱಿಯದಯ್ಯ ನೀವಿನ್ನಿದಂ ರಕ್ಷಿಪುದು
ಹೊರೆವುದಿನಿತಂ ಬೇಡಿ ಪಡೆದೆ ನಾ ನಿಮ್ಮಲ್ಲಿ
ಕರುಣಿಸೆನಗೆಂದು ಕೈಮುಗಿದು ಮುನಿಗಪ್ಪಯಿಸಿಕೊಟ್ಟನು
ಹರಿಶ್ಚಂದ್ರನು ॥ ೨೨

ಒಸೆದೀವ ತೆಜಿಕಾಱನಾರಾತನಂ ನಿಯಾ-
ಮಿಸು ತಂದೆ ಎನೆ ತನ್ನ ಶಿಷ್ಯಾಳಿಯೊಳು ನೋಡಿ
ಹುಸಿಯಸೂಯಾನೀಚವೃತ್ತಿ ನಿದಾರ್ಕ್ಷಿಣ್ಯ
ನಿಷ್ಕರುಣನೀತಿಗಳಲಿ
ಹೆಸರುಳ್ಳ ಹಿರಿಯ ನಕ್ಷತ್ರಕನೆನಿಪ್ಪ ಮಾ-
ನಿಸನನೆಕ್ಕಟಿ ಕರೆದು ಕೈವಿಡಿದು ಕಿವಿಯೊಡ್ಡಿ
ವಸುಧಾಧಿಪತಿಯ ಬಳಿವಿಡಿದು ಕಳುಹಲು
ಬುದ್ಧಿಗಲಿಸಿದನದೇವೊಗಳ್ವೆನು ॥ ೨೩

ಕೊಡುವೊಡವೆ ಬರಲಿ ಬಾರದೆ ಕೆಡಲಿ ಕಾನನದ
ನಡುವೆ ತಗಹಿನಲಿರಿಸಿ ಕೆಲವು ದಿನವುಪವಾಸ-
ಬಡಿಸಿರ್ದು ಕೆಲವು ದಿನ ದೇಹವನುವಲ್ಲೆಂದು-
ನೆವವೊಡ್ಡಿ ಕೆಲವು ದಿವಸ
ನಡೆವಾಗ ದಾರಿದಪ್ಪಿಸಿ ತಿರಿಪಿ ಕೆಲವು ದಿನ
ಪಡಿಯ ಬೀಯಕ್ಕಾಣೆಯಿಟ್ಟಂತು ಕೆಲವು ದಿನ
ಕೆಡಿಸಿ ನುಡಿದವಧಿಯಾಯ್ತೆಂದು ಧರೆಯಱಿಯೆ-
ನೃಪನಂ ಹುಸಿಕನೆನಿಸೆಂದನು ॥ ೨೪

ಕರುಣಿಸದಿರನುಗೊಡದಿರಗಲದಿರು ಅನುಸರಿಸ
ದಿರು ಬಟ್ಟೆಯೂರಲಿಡೆಗೆಯ್ಯದಿರು ಕಡೆಗಾವ
ಪರಿಯೊಳಾವಾವ ನಿಗ್ರಹನಿರೋಧಾಯಾಸ-
ವಡಸುವಂದದಿ ಮಾಳ್ಪುದು
ಗುರುಭಕ್ತನಾದಡತಿ ಬುದ್ಧಿಯುಳ್ಳವನಾದ-
ಡರಸನಂ ಕೆಡಿಸಿ ಹುಸಿ ತೋಱೆಂದಡೆನಗವಂ
ಕರಗುವನೆ ದೇವಯೆನೆ ನೇಮಕ್ಕೆ ನೀನಿರಾಂ-
ಬಂದು ಕಾಡುವೆನೆಂದನು ॥ ೨೫

ಬಿಸಿಲಾಗಿ ಬಿಱುಗಾಳಿಯಾಗಿ ಕಲ್ಲುನೆಲನಾಗಿ
ವಿಷವಾಗ್ನಿಯಾಗಿ ನಾನಾ ಕ್ರೂರಮೃಗವಾಗಿ
ಮುಸಗಿ ಘೋರಾರಣ್ಯವಾಗಿ ಗರ್ಜಿಸಿ ಕವಿವ-
ಭೂತಬೇತಾಳರಾಗಿ
ಹಸಿವು ನೀರಡಿಕೆ ನಿದ್ರಾಲಸ್ಯವಾಗಿ ಸಂ-
ದಿಸಿ ಹೋಗಿ ಹೊಕ್ಕಲ್ಲಿ ಹೊಕ್ಕು ಧಾವತಿಗೊಳಿಸಿ
ಹುಸಿಗೆ ಹೂಂಕೊಳಿಸುವೆಂ ಭೂಭುಜನನೆನ್ನಿಂದ-
ಬಲ್ಲಿದರದಾರೆಂದನು ॥ ೨೬






ಬೇಱೊಬ್ಬನಲ್ಲೀತನೀ ಬಂದನಾಯಾಸ-
ಕಾಱನತಿ ಗರುವನತಿ ಸುಖಿಯೀತನೆಂದುದಂ
ಮೀಱದಿರು ಧನವ ಕೊಡು ನಡೆಯುಗಸ ಹೋಗೆನಲು-
ಮುನಿವರನ ಚರಣಕೆಱಗಿ
ನೀಱೆಸತಿಸುತಮಂತ್ರಿವೆರಸಿ ರಿಪುಬಲಸೂಱೆ-
ಕಾಱನೊಲವಿಂ ತಿರುಗಿ ನಡೆವಾಗ ಮಂದಿ ಬಾ-
ಯಾಱುತ್ತ ಚೀಱುತ್ತ ಗೋಳಿಡುತ್ತಳುತಿದ್ದು-
ನಡೆದುದೇವಣ್ಣಿಸುವೆನು ॥ ೨೭

ತಡೆಬಿಟ್ಟ ಕಂಬನಿಯ ಕೈಯಿಂದ ಮುಂಗಾಣ-
ದೆಡಹುತ್ತ ಲಾಗುತ್ತ ಬೀಳುತೇಳುತ್ತೊಱಲು-
ತೊಡವರ್ಪ ಪರಿವಾರಮಂ ಕಂಡು ಕೈಯೆತ್ತಿ
ಹೋ ಎಂದು ನಿಲಿಸಿ ನೃಪನು
ಕಡೆಗೆನ್ನ ಸತ್ಯಕ್ಕೆ ಹಿತವರಾದವರ್ಗಳಿ-
ದ್ದೆಡೆಯೊಳಿದ್ದೆನ್ನ ಲೇಸಂ ಬಯಸುತಿಹುದು ಬಂ-
ದಡೆ ತ್ರಿಶಂಕುನರೇಂದ್ರನಾಣೆಯೆನೆ ಮೀಱಿದೆವು-
ಬಂದಲ್ಲದಿರೆವೆಂದರು ॥ ೨೮



ಇಂದುತನಕನ್ಯತವಂಟದ ಸೂರ್ಯವಂಶಕ್ಕೆ
ಕುಂದ ಬಯಸುವರೆ ನಾನಳುಪುತಿರೆ ಕಂಡು ಬೇ-
ಡೆಂದೆಂಬರಲ್ಲದಿಂತಳಲ್ವರೇ ಬಳಲ್ವರೇ ಬಳಿಸಂದು-
ಬಹೆನೆಂಬರೇ
ಒಂದೆಡೆಯೊಳಿರ್ದ ಸಾಲವನು ನಿರ್ಣೈಸಿ ಮುದ-
ದಿಂದ ಕರಸುವೆನೆನ್ನ ಕೂಡಿಂದು ಬಂದವರು
ಹಿಂದಿರ್ದ ಮುನಿಗೆ ಬೆಸಕೆಯ್ಯುತಿರಿಯೆಂದರಸ-
ನೆಲ್ಲರ್ಗೆ ಕೈಮುಗಿದನು ॥ ೨೯

ಎಲ್ಲಾ ಕಳಾನಷ್ಟನೆಂದೆನಿಸಿ ಹೋದಿರುಳ
ನಲ್ಲನೆಂದೆಯ್ತಪ್ಪನನ್ನಬರ ಹಸಿದಿರ್ದ-
ವಲ್ಲದುಂಡವೆ ಬಿಸಿಲನೆಳೆಯ ಬೆಳುದಿಂಗಳಂ-
ಕುಡಿದಿಹ ಚಕೋರಂಗಳು
ನಿಲ್ಲದಿಂದೀಗರಸನೆಂದು ನಿಮ್ಮೊಡನೊಯ್ಯ-
ಲೊಲ್ಲದಿರೆ ನೀಂ ಮರಳಿ ಬಪ್ಪಂದುತನಕ ಕ-
ಣ್ಣಲ್ಲಿಯೇ ಜೀವವನು ಪಿಡಿದಿಪ್ಪೆವನ್ಯರಂ
ಸೇವಿಸುವುದಿಲ್ಲೆಂದರು ॥ ೩೦

ಕಾಡಬೇಡಿನ್ನು ಚಲಬೇಡ ಕೋರಡಿಗತನ
ಬೇಡ ಮೂರ್ಖತ್ವ ಬೇಡೆಂದೆರಡು ಕೈಮುಗಿದು
ಬೇಡಿಕೊಂಡೆಂ ನಿಮ್ಮನೆನಲೊಡಂಬಟ್ಟು
ಬೀಳ್ಕೊಂಡೆವಿಂದೆಮ್ಮ ಚಿಂತೆ
ಬೇಡ ನೀನೊಲಿದತ್ತ ಹೋಗೆನಲು ಸಂತಸಂ-
ಮಾಡಿ ನಡೆಗೊಂಡ ಭೂಪನ ಗುಣಂಗಳನು ಕೊಂ-
ಡಾಡುತ್ತ ಹಲುಬುತ್ತ ನೋಡುತಿರ್ದುದು ಜನಂ
ದೃಷ್ಟಿ ಸೈವೆಱಗಾಗಲು ॥ ೩೧

ಜನನಿ ಹಿಂಗಿದ ಶಿಶುಗೆ ಸಸಿ ಬಿಟ್ಟ ಕುಮುದಕ್ಕೆ
ದಿನನಾಥನುಳಿದ ಕಮಲಕ್ಕೆ ನೆಱೆ ಸಿರಿ ಸಮೆದ
ಮನೆಗೆ ಜೀವಂ ತೊಲಗಿದೊಡಲಿಂಗೆ ತೈಲವಿಂಗಿದ-
ದೀಪ್ತಿಗುದಕವಱತ
ಘನ ತಟಾಕಕ್ಕೆ ಫಲವಿಳುಹಿದ ಮರಕ್ಕೆ ನೆ-
ಟ್ಟನೆ ಜೋಡಿಯಾದುದಾ ಪುರಜನಂ ಪರಿಜನಂ
ಜನಪತಿ ಹರಿಶ್ಚಂದ್ರನೆಲ್ಲವಂ ಮುನಿಗಿತ್ತರಣ್ಯಕ್ಕೆ
ನಡೆವಾಗಲು ॥ ೩೨

೫

## ಕುಮಾರವ್ಯಾಸ

### ಯಕ್ಷಪ್ರಶ್ನೆ

ಕೇಳು ಜನಮೇಜಯಧರಿತ್ರೀ-
ಪಾಲ ಪಾಂಡುಕುಮಾರರಡವಿಯ
ಪಾಳಿಯಲಿ ಕಾಲವನು ಕಳೆದರು ಹಲವು ಮಾಸವನು
ಆಳಿದರು ವನವಾಸದಾಯುಸ-
ದಾಳಿಕೆಯ ಸಾಮ್ರಾಜ್ಯವನು. ಸಂ-
ಮೇಳಸೌಖ್ಯವ ಸೌಮನಸ್ಯದ ಸುಖದ ಭಾರದಲಿ ‖ ೧

ಪಾಲಿಸಲು ಭಕ್ತರನು ಪರಮ ದ-
ಯಾಳು ದ್ವಾರಕೆಯಿಂದ ಲಕ್ಷ್ಮೀ-
ಲೋಲ ಬಿಜಯಂಗೈದು ಪಾಂಡವರಕ್ಷಣಾರ್ಥದಲಿ
ಕಾಲನನು ಕರೆದೊಂದುಪಾಯವ
ಮೇಳವಿಸಿ ತಾ ಬಟಿಕ ಭೂಸುರ-
ನಾಲಯವ ಸಾರಿದನಃ ಹೊಮ್ಮಱಿಯಾಕೃತಿಯ ತಾಳಿ ‖ ೨

ವಿಮಲ ವಾನಪ್ರಸ್ಥಜನರಾ-
ಶ್ರಮದೊಳಗೆ ಸಾರಂಗಮೃಗವಿಳಿ-
ಯಮರನೌಪಾಸನದ ಸಾಧನದರಣಿಯನು ಕೊಂಡು
ಕಮಲಸಖನುದಯದಲಿ ಸಂಧ್ಯಾ-
ರಮಣಿಯಭಿವಂದನೆಗೆ ಸನ್ಮುನಿ-
ಸಮಿತಿ ಹಿಂಗಿದ ಬಳಿಕ ಕೊಂಡೋಡಿತ್ತು ವಿಪಿನದಲಿ ‖ ೩

ಎಲೆಲೆ ಮೃಗವರಣಿಯನು ವಂಚಿಸಿ
ಕಳೆದುದೋ ಕಾಳಾಯ್ತೆನುತ ತ-
ಲ್ಲಳಿಸಿದಳು ನಿಜಪತಿಯ ಭಯದಲಿ ಮುನಿಯವಧುವಂದು
ಹೊಳೆಯ ಸಂಜೆಯ ಸಾಧುಗಳು ಕಳ-
ವಳಿಸಲಾ ದ್ವಿಜನಱಿದು ಪಾರ್ಥಿವ-
ರಿಳೆಯ ಬಿಟ್ಟರಲಾಯೆನುತ ಹರಿತಂದನಾಶ್ರಮಕೆ ‖ ೪

ಎಲೆ ಯುಧಿಷ್ಠಿರ ದೋಷವಿದು ನಿ-
ನ್ನಳವಿಗೈದುವುದರಣಿಯನು ಮೃಗ-
ವೆಳೆದುಕೊಂಡೀ ಹೊದರ ಹೊಕ್ಕುದು ಬಹಳ ಕಾನನವ
ಅಳಿದುದನ್ಯಾಧಾನವಿತರರ
ಹಳಿವಿಗಾನೊಳಗಾದೆನೆನೆ ದ್ವಿಜ-
ತಿಲಕನೌಪದ್ರವವನಱಿದವನೀಶ ಹೊಱನಂಟ ‖ ೫

ಜಾಳಿಸಿದ ಹೆದೆಬಿಲ್ಲು ಮುಮ್ಮೊನೆ-
ಬೋಳೆಗಳ ಸಿಡಗುಂಡುಗಳ ಬಡಿ-
ಗೋಲುಗಳನೆಕ್ಕಡವನುರುಪಾರಿಯದ ಕುಪ್ಪಸವ
ಮೇಳವಿಸಿ ಹೊಱವಂಟನವನೀ-
ಪಾಲ ಬೇಂಟೆಗೆ ಮೃಗದ ಹೆಜ್ಜೆಯ
ಮೇಲೆ ಹೆಜ್ಜೆಯ ಹರಿಸಿದನು ತನ್ನನುಜರೊಡಗೂಡಿ ‖ ೬

ಕಾಣಿಸುತ ಕಂಗಳಿಗೆ ತಾನತಿ
ಜಾಣಿನಿಂದುಱೆ ದೂರವಲ್ಲದೆ
ಕಾಣಿಸುತ್ತರಣಿಯನು ನೋಡುತ ಮುಱಿದು ಕೆಲಬಲನ
ಕ್ಷೋಣಿಪತಿಗಳು ಮುಟ್ಟೆ ಬರಲ-
ಕ್ಷೀಣಮೃಗ ಪುಟನೆಗೆದು ಹಾಱಿತ
ಕೇಣದಲಿ ಕೊಂಡೊಯ್ದುದಿವರನು ವಿಷಸರೋವರಕೆ || ೭

ಇಱುಬಿನೊಳಗಡೆ ಕುತ್ತು ಪೆರ್ಮರ-
ದುಱುಗಲೊಳಗಡೆ ತೊಡಚು ಬಾಣವ-
ನೆಱಿಗಿ ತಿವಿ ತೋಡಿಟ್ಟೆಯಲಿ ಸಿಡಿವಲೆಯನೊಡ್ಡೆನುತ
ಅಱಿಸಿದರು ನಟ್ಟಡವಿಯಲಿ ಮುಂ-
ದುಱುಬಿದರು ಬೆಳ್ವಾರವಲೆಗಳ
ಹಱಿಹಿ ಸೊಪ್ಪಿನ ಸೋಹಿನಲಿ ಸಿಲುಕಿಸಿದರಾ ಮೃಗವ || ೮

ಕೇಳು ಜನಮೇಜಯ ಹಿಮಾಂಶುವಿ-
ಶಾಲವಂಶಜರಡವಿಯಲಿ ಮುನಿ-
ಪಾಲನರಣಿಯನೊಯ್ದ ಮೃಗವನು ಹಿಡಿದರೊಳಬಿದ್ದ
ಮೇಲೆ ತೋಱಿತು ಧಗೆ ಮಹೀಶರ
ತಾಳಿಗೆಗಳೊಣಗದುವು ಬಟಲಿಕೆ-
ಯೇಳಿಗೆಯಲಾಸನ್ನಲತೆಯಿಱುಬಿನಲಿ ಮಲಗಿದರು || ೯

ದೂರವಾದುದು ನಿಳಯವೀ ಕಾಂ-
ತಾರ ನಿರ್ಜಲವೈದಲಂಘ್ರಿಗೆ
ಭಾರ ಪದವಿನ್ನೇನು ಹದನೆಂದರಸನಱವಱಿದು
ನೀರ ತಾರೈ ಹೋಗು ನಕುಲ ಸ-
ರೋರುಹದ ಪತ್ರದಲಿ ನಿರ್ಮಲ
ವಾರಿಯನು ತಹುದೆಂದು ಕುಂತೀಸೂನು ನೇಮಿಸಿದ || ೧೦

ಬಗೆದನೇ ಬಳಲಿಕೆಯನತಿ ಸಹ-
ಸಿಗಳ ದೇವನು ಹಿರಿಯನಾಜ್ಞೆಯ-
ನುಗುಳಲಮ್ಮದೆ ಧನುವ ಕೊಂಡನು ನಡೆದನತಿಪಥವ
ದೃಗುಮನೋಮಂಜುಳದ ಕಂಜಾ-
ಳಿಗಳ ಕಡು ಪರಿಮಳದ ಪಸರದ
ಸೊಗಸು ಮಿಗೆ ತೀಡಿತ್ತು ಪದ್ಮಾಕರದ ಪವಮಾನ ೧೧

ಹಿತವನೈ ಹಿರಿಯಯ್ಯನೆನಗೆಂ-
ದತುಳಬಲ ಪರಿತೋಷದಲಿ ಮಾ-
ರುತನ ಬಟ್ಟೆವಿಡಿದೈದಿದನು ನಕುಲಾಂಕನಾ ಕೊಳನ
ಹತಿಯಹುದು ನಿನಗೊಮ್ಮೆ ತಪ್ಪದು
ಹಿತವು ಬಟ್ಟೆಕೆಂಬಂತೆ ಖಗಸಂ-
ತತಿಗಳುಲಿದೊಪ್ಪಿದುವು ಪದ್ಮಾಕರದ ತೀರದಲಿ ॥ ೧೨

ಇರವಿನಲಿ ರಚನೆಯಲಿ ಮಧುರೋ-
ತ್ತರವ ನೆಱೆ[3] ಬೀಱುತ್ತಲಂತಃ-
ಕರಣದಲಿ ಕತ್ತರಿಸಿಕೊಂಡಿಹ ಕುಜನರಂದದಲಿ
ಪರಿಮಳದ ಪಸರದಲಿ ಶೈತ್ಯೋ-
ತ್ಕರುಷದಲಿ ಲೇಸೆನಿಸಿ ಕುಡಿದರೆ
ಹರಣವನೆ ಹಿಂಗಿಸುವ ಸರಸಿಯ ವಾರಿ ಚೆಲುವಾಯ್ತು ॥ ೧೩

ಖಳರ ಸತ್ಯದವೋಲು ವಂಚಿಸಿ
ಕಳೆದುದಾತನ ಮನವ ಮಾಯೆಯ
ಚೆಲುವಿನಂತಿರೆ ಚೆದುರಗೆಡಿಸಿತು ತಿಳಿಯಲರಿದೆನಿಸಿ
ಲಲನೆಯರ ಹೃದಯದವೊಲೀಕ್ಷಿಸೆ
ನೆಲೆಯನೀಯದ ಕೃತಕಸರಸಿಯ
ಸುಲಭತೆಗೆ ಸಹದೇವನಣ್ಣನು ಸೋತು ನಡೆತಂದ ॥ ೧೪

ಇಳಿದು ಮೊನೆಮುಂಜೆಜಗನಗ್ರಕೆ
ಒಲಿದು ಹೊಕ್ಕನು ಜಾನುದಘ್ನ-
ಸ್ಥಳವನಂಜಳಿಯಿಂದ ತೊಳೆದನು ಚರಣವದನವನು
ತುಳುಕಿದನು ವಾರಿಯನು ತನ್ನಯ
ಬಳಲಿಕೆಯ ಪರಿಹರಿಸಿ ಭೂಪತಿ
ಗಳಿಗೆ ಬಟಿಕಾನೊಯ್ವೆನೆಂದನು ತನ್ನ ಮನದೊಳಗೆ ॥ ೧೫

ಜಲವನಂಜಳಿಯಿಂದ ಮೊಗೆದೀಂ-
ಟಲು ನೆನೆಯಲಭ್ರದಲಿ ಗುಹ್ಯಕ-
ನುಲಿದನೆಲೆ ನಕುಲಾಂಕ ಮಾಣೆನಗುತ್ತರವ ರಚಿಸಿ
ಬಟಿಕ ಸಲಿಲವನೀಂಟು ಮಾತುಗ-
ಳೊಳವು ಮರುಳಾಗದಿರೆನಲು ಥಗೆ
ಗಳುಕಿ ಬಟಲಿಸೆ ಮೇಲನಾಲಿಸಿ ಮೀಱಿದನು ನುಡಿಯ ॥ ೧೬

ಜಡಿಯಲೆರಡಳ್ಳೆಗಳು ಕೊಳದಲಿ
ಕುಡಿದನುದಕವನಬುಜದೆಲೆಯಲಿ
ಪಿಡಿದನನಿಬರಿಗಮಲ ಜಲವನು ಮರಳಿ ನಿಮಿಷದಲಿ
ತಡಿಯನಡರಲು ಧೊಪ್ಪನವನುಱೆ
ಕೆಡೆದು ಪರವಶನಾದನಿತ್ತಲು
ತಡೆದನೇಕೆಂದಟ್ಟಿದನು ಸಹದೇವನನು ನೃಪತಿ ॥ ೧೭

ತವಕ ಮಿಗೆ ನಡೆತಂದು ವೈಮಱೆ-
ದವನ ಕಂಡನು ಬಹಳ ಥಗೆ ಪರಿ-
ಹರಿಸಲುದಕವ ಕುಡಿದು ಬಟಿಕಾರೈವೆನಿದನೆನುತ
ಲವಲವಿಸಿ ತಾಳಿಗೆಯ ತಲ್ಲಣ-
ದವನು ಹೊಕ್ಕನು ಕೊಳನನಮುಳಾಂ
ಬುವನು ಮೊಗೆದನು ಮೊಗಕೆ ನೆಗಹಲು ಮೇಲೆ ದನಿಯಾಯ್ತು॥೧೮

ಬಿಡು ಬಿಡೆಲೆ ಸಹದೇವ ತನ್ನಯ
ನುಡಿಗೆ ಮಾಱುತ್ತರವ ಕೊಡು ಮುಂ-
ಗೆಡದೆ ಮುಂದಣ ನಿನ್ನವನ ಕಂಡಿಂತು ಮರುಳಹರೇ
ಮಡಿಯಲೆಳಸದಿರೆನಲು ಧಗೆಯವ-
ಗಡಿಸೆ ಸೈರಿಸಲಱಿಯದುತ್ತರ
ಗುಡದೆ ಜಲವೀಂಟಿದನು ದಾಂಟಿದುದಸು ಕಳೇಬರವ ॥ ೧೯

ಈತನತಿವ್ಯೈಮಱಿದನಿತ್ತಲು
ಕಾತರಿಸಿದನು ಭೂಪನಿಬ್ಬರ
ಮಾತು ಮುಖದಿರುಹಿತ್ತು ಶಿಶುಗಳಿಗಾವ ಹದನಾಯ್ತೊ
ತಾತ ಹೋಗೈ ಪಾರ್ಥ ಬಾಲಕ-
ರೇತಕತ್ತಲು ತಡೆದರೆಂಬುದ
ನೀ ತಿಳಿದು ತಾ ಜಲವನೆನೆ ಕೈಕೊಂಡು ನಡೆತಂದ ॥ ೨೦

ಹಿಮದ ಗಾಳಿಯ ಪಥವಿಡಿದು ಮ-
ಧ್ಯಮದ ಪಾಂಡವನೈತರುತ ಮುಂ-
ದಮಲ ಸರಸಿಯ ತೀರದಲಿ ಕೇಲಿಸಿದ ಮಗ್ಗುಲಲಿ
ಯಮಳರೊಱಗಿರೆ ಕಂಡು ಮನದಲಿ
ತಮವ ಹಿಡಿದನು ನೀರ ಕುಡಿದೀ
ಮಮತೆ ಮಿಗಲಾರೈವೆನೆನುತಿೞಿದನು ಸರೋವರವ ॥ ೨೧

ಚರಣ ವದನವ ತೊಳೆದು ಧಗೆ ಡಾ-
ವರಿಸಲಕ್ಷಮನಾಗಿ ಕರದಲಿ
ತೆಱೆಗಳನು ತೆಗೆನೂಕಿ ಮೊಗೆದನು ಗರಳಮಯಜಲವ
ಮರುಳೆ ನೀಂ ಕೌಂತೇಯ ಮಾದ್ರೇ-
ಯರನು ನೋಡುವುದೇನು ನನಗು
ತ್ತರವನಿತ್ತುದಕವನು ಕುಡಿ ಎಂದುದು ನಭೋನಿನದ ॥ ೨೨

ಮೇಲನಾರೈವನೆ ಸುತೃಷ್ಣಾ-
ಲೋಲಚಿತ್ತನು ಕಾಮಮೃಗಯಾ-
ಕೇಳಿಲಂಪಟನರ್ಥಲಾಭದ್ಯೂತಲೋಲುಪನು
ಕೇಳು ಜನಮೇಜಯ ತಟಾಕದ
ಕಾಳಕೂಟವನೀಂಟಿ ತಡಿಯಲಿ
ಕಾಲಿಡುತ ಡೆಂಘಣಿಸಿದನು ಮೈಮಱೆದನಾ ಪಾರ್ಥ ॥ ೨೩

ಮಡಿದರಿತ್ತಲು ಮೂವರನುಜರು
ತಡೆದರೇನು ವಿಚಿತ್ರವಾಯಿತು
ನಡೆ ಸಮೀರಕುಮಾರ ನೀ ಹೋಗತ್ತಲಡಗದಿರು
ತಡೆಯದೈತಹುದೆನೆ ಹಸಾದದ
ನುಡಿಯುಲವನೈದಿದನು ಹೆಜ್ಜೆಯ
ಹಿಡಿದು ಬಱಿಸಲಿಸಿದನು ಬರೆಬರೆ ಕಂಡನದ್ಭುತವ ॥ ೨೪

ಥಟ್ಟುಗೆಡೆದಸುಗಳೆದ ತನ್ನೊಡ-
ಹುಟ್ಟಿದರನೀಕ್ಷಿಸಿದನುಸುರಿನ
ಟ್ಟೆಯನು ನೋಡಿದನು ಮೂಗಿನ ಬೆರಳ ಬೆಱಗಿನಲಿ
ಮುಟ್ಟಿತಿವರಿಗೆ ಮರಣವಿನ್ನೇ-
ಟ್ಟಿ ಕೊಲುವೆನು ಜವನ ಮೃತ್ಯುವ
ಟ್ಟಿಲುವನುದುರಿಸುವೆನೆನುತೊಡಱಿದನು ಕಲಿಭೀಮ ॥ ೨೫

ಮನ್ನಣೆಗೆ ಹಿರಿಯಯ್ಯನೆಂದಾ-
ನ್ನು ಬಗೆವೆನೆ ಜವನ ಗಂಟಲ
ಮುನ್ನ ತಿರುಹುವೆನೆನುತ ಕಿಡಿಕಿಡಿಯಾಗಿ ಖಾತಿಯಲಿ
ನ್ನೊದಱಿ ಫಲವೇನು ಕುಡಿವೆನು
ಮುನ್ನ ಜಲವನು ಬಳಿಕ ನೋಡುವೆ-
ನಿನ್ನವರ ಮಾರ್ಗವನೆನುತ ಮೊಗೆದನು ವಿಷೋದಕವ ॥ ೨೬

ಮಾಣು ಮಾಣುತ್ತರವ ಕೊಡು ಮುಂ-
ಗಾಣಬೇಹುದು ತಂದೆ ತನಗೀ
ಕ್ಷೋಣಿಯಲಿ ಪೂರ್ವದ ಪರಿಗ್ರಹವೀ ಸರೋವರವು
ಜಾಣನಾದರೆ ಜಾರಬಿಡುಬಿಡು
ಕೇಣವನು ಮಾಣೆನಲು ಗಗನದ
ವಾಣಿಯನು ಮನ್ನಿಸದೆ ಪವನಜನೀಂಟಿದನು ಜಲವ ॥ ೧೭

ದಡದಡಿಸಿ ಕೊಳನಿಂದ ಹೊಱಟಡಿ-
ಯಿಡುತ ಬಟಲಿದನನಿಲಸುತನವ-
ರೊಡನೆ ವೈಯಿಕ್ಕಿದನು ಕಳಚಿದ ನೀಲಗಿರಿಯಂತೆ
ಅಡಿಗೆಡೆದನಾ ಭೀಮನಿತ್ತಲು
ಕಡು ನಿರೋಧವ ಹಿಡಿದು ತಾನೇ
ನಡೆದುಬಂದನು ಧರ್ಮಸುತನಾ ಕೊಳನ ಪಥವಿಡಿದು ॥ ೧೮

ಮೇಲೆ ಮುಸುಳ್ದಾಲಿಗಳ ಚಾಚಿದ
ತೋಳ ಮೇಲಣ ತಲೆಯ ಸುಯ್ಲಿನ
ಲೀಲೆಯಡಗಿದ ಮುಖದ ಮಸುಳಿದ ಕಾಯಕಾಂತಿಗಳ
ಮೇಲೆ ಮಸಗಿದ ಮುಗ್ಗಲಿನಲಿಹ
ನಾಲುವರನೀಕ್ಷಿಸಿ ಮಹೀಪತಿ
ಕೋಲು ಮಱಮೊನೆಗೊಂಡವೋಲ್ ಮಱುಗಿದನು ಚಿತ್ತದಲಿ ॥ ೧೯

ಮುಸುಕನರೆದೆಗೆದವರವರ ಮುಖ-
ದುಸುರುಗಳನೀಕ್ಷಿಸಿದನಕಟಾ
ಶಿಶುಗಳಿಗೆ ಕಡು ಹಾನಿಯಾಯಿತೆ ಶಿವ ಮಹಾದೇವ
ನಿಶಿತಶಸ್ತ್ರದ ಗಾಯವಿಲ್ಲ-
ಬ್ಬಸದ ಸಾವಿಂಗಾವುದೋ ತಾ-
ನಸುಗಳೆಯದೆಯು ಕೆಟ್ಟೆನೆಂದಟಲಿದನು ಮನದೊಳಗೆ ॥ ೨೦

ಇಂದಿನಲಿ ಕಡೆಯಾಯ್ತಲಾ ವಿಮ-
ಲೇಂದುವಂಶಕೆ ಕೌರವನ ಛಲ
ಸಂದುದಿನ್ನ ಹಿತಾವನೀಶರಿಗಾಯ್ತು ಪರಿತೋಷ
ಕೊಂದರಾರೋ ಅಕಟಕಟ ಅರ-
ವಿಂದನಾಭನ ಕೃಪೆಗೆ ಬಾಹಿರ-
ನಿಂದು ತಾನಾದೆನೆ ಮಹಾದೇವೆನುತ ಚಿಂತಿಸಿದ ॥ ೩೧

ಹರಹರಾ ಶಂಕರ ಕೃಪಾಕರ
ಪೊರೆಯೊ ಪುರಹರ ಆವ ತೆರದಿಂ
ತೊರೆವೆನೊಡಲಿದನಕಟಕಟ ಶ್ರೀಕಾಂತ ಮುರವೈರಿ
ಗರುಡವಾಹನ ಕಮಲಲೋಚನ
ಧರೆಗೆ ಹೊರೆಯಾದೆನ್ನ ತನುವನು
ಇರದೆ ಬಿಸುಡುವ ತೆರನ ಕೃಪೆಮಾಡೆಂದನಾ ಭೂಪ ॥ ೩೨

ಧಾರುಣಿಗೆ ಬಲವಂತ ತಮ್ಮದಿ-
ರೋರಣದಿ ಮಿಗೆ ನಾಲ್ವರಿರುತಿರೆ
ಭೂರಿಮುದದಿಂದಡವಿಯೇ ಸಾಮ್ರಾಜ್ಯವೆನುತಿದ್ದೆ
ಆರಿಗೊಱಲುವೆನಾರ ಸಾರುವೆ-
ನಾರು ತನ್ನನು ಸಲಹುವರು ಕಾಂ-
ತಾರದೊಳಗಾನೊಬ್ಬನಾದೆನೆ ಶಿವಶಿವಾ ಎಂದ ॥ ೩೩

ತೋಱದಿರೇ ತಮ್ಮದಿರ ತನ್ನನು
ಮಱದಿರೇ ಸುಕುಮಾರರಿರ್ದ್ವೈ-
ಮಱದಿರೇ ತಾ ಮಾಡಿದವಗುಣದಖಿಳದಾಯಸವ
ನೆಱಿಯತಾಳುತ ನಿಮ್ಮ ಮನ ಬೇ-
ಸಱಕೆಯಾದುದೆ ಆವ ತೆರದಿಂ
ದುಱುವ ಪ್ರಾಣವ ತೋಱದಿರೆಂದನು ದೆಸೆಗೆ ಬಾಯ್ಬಿಡುತ ॥ ೩೪

ಎಂದು ದೆಸೆದೆಸೆಗಳಿಗೆ ಬಾಯ್ಬಿಡು-
ತಂದು ನಾನಾ ತೆರದಿ ನಿಜಗುಣ-
ವೃಂದವನು ಹಲುಬಿದನು ತಮ್ಮಂದಿರಿಳವನೀಕ್ಷಿಸುತ
ಕಂದರಿವರನು ಕಾಣೆನೇ ಹಾ
ಎಂದು ಥಗೆಯುವಗಡಿಸಲಾಕ್ಷಣ
ನಿಂದು ನೋಡಿದ ಕೊಳನ ಜಲವನು ಭೂಪನಬಿವಟೀದು ||೩೫

ಹೋಗಲಿನ್ನೀ ನೀರುಗುಡಿದಿವ-
ರಾಗಹೋಗಱಿಸುವೆನೆನುತ ಥಗೆ
ತಾಗಿದವನಿಪನಿಬಿದು ಹೊಕ್ಕನು ವಿಷಸರೋವರವ
ಬಾಗಿ ಮೊಗೆದನು ಜಲವನಭ್ರದೊ-
ಳಾಗಲಾದುದು ರಭಸವೆಲೆ ಸಕ
ಲಾಗಮಜ್ಞ ಮಹೀಶ ಕೇಳೆಂದುದು ನಭೋನಿನದ || ೩೬

ಅನುಜರವಿವೇಕಿಗಳು ಪರಿಣತ-
ತನದಲಧಿಕನು ನೀ ನಿಧಾನಿಸಿ
ತನಗೆ ಮಾಱುತ್ತರವನಿತ್ತು ನಿರಂತರಾಯುದಲಿ
ತನುವಿಗಾಪ್ಯಾಯನವ ಮಾಡುವು-
ದೆನಲು ಸ್ಥೈರಿಸಿ ಥಗೆಯ ನೋಡದೆ
ಘನಪಥದ ನುಡಿ ಯಾರದೆಂದವನೀಶನಾಲಿಸಿದ || ೩೭

ಬಿಸುಟನುದಕವನಾ ನುಡಿಯನಾ
ಲಿಸಿದನಾರೈ ನೀನು ನಿನಗಾ-
ಗಸದಲಿರವೇನಸುರನೋ ಕಿನ್ನರನೊ ನಿರ್ಜರನೊ
ಉಸುರೆನಲು ತಾಂ ಯಕ್ಷನೀ ಸಾ-
ರಸವು ನನ್ನದು ನಿನ್ನ ತಮ್ಮದಿ
ರಸುವನೆಳೆದವನಾನು ಕೇಳೈ ಧರ್ಮಸುತ ಎಂದ|| ೩೮

ಬಾಲಕರು ನೀವೆನ್ನ ಮಾತನು
ಕೇಳಿಯುದಕವ ಕುಡಿವುದೆನೆ ಭೂ-
ಪಾಲ ನನ್ನವರೆನ್ನ ಮಾತನು ಕೇಳಿ ಮನ್ನಿಸದೆ
ಮೇಲುಗಾಣದೆ ನೀರಗುಡಿದು ವಿ-
ಟಾಳಿಸಿದರಿಂದೆನ್ನ ಮಾತನು
ಕೇಳಿ ನೀನುತ್ತರವ ರಚಿಸೆಲೆ ರಾಯ ನೀನೆಂದ ॥ ೩೯

ಆವುದೈ ನಿನ್ನಱಿತ ನಿನಗಾ-
ನಾವ ಪರಿಯಿಂದುಸುರ್ವೆ ನೀನದ.
ನೋವಿ ಬೆಸಗೊಳಲೆನಿತ ಕೇಳುವೆನೆನಲು ಗುಹ್ಯಕನು
ನೀವು ಕರ ಧರ್ಮಜ್ಞರೆಂಬಭಿ-
ಭಾವಿಗಳು ಗಡ ಧರ್ಮಕಥನವ
ನೋವಿ ರಚನೆಯ ರಚಿಸುವುದುಯೆನೆ ನೃಪತಿಯಿಂತೆಂದ ॥ ೪೦

ಧರ್ಮವೆಂಬುದನುಸುರಬಹುದೇ
ಧರ್ಮವಾರಿಗೆ ಗೋಚರವು ತ-
ದ್ಧರ್ಮಸಾರವನಱಿವನಾರೀ ವರ್ತಮಾನದಲಿ
ಧರ್ಮವಱಿದುದನಱಿಪುವೆನು ತಾ
ನಿಮ್ಮ ಚಿತ್ತಕೆ ಸೊಗಸಿದೊಡಮದ
ನೆಮ್ಮ ಕೇಳಿಲೆ ಖಚರ ಪ್ರಶ್ನೆಯ ನೃಪತಿಗಿಂತೆಂದ ॥ ೪೧

ಜಲನಿಧಿಗೆ ಸರಿ ಸರಸಿಯಾವುದು
ನೆಲಕೆ ಹಿತವನದಾರು ಮರ್ತ್ಯ-
ವಳಿಗೆ ಮಾತೆಯದಾರು ಸೂರ್ಯಪ್ರಭೆಗೆ ಸರಿಯೇನು
ತಿಳುಹು ಧರ್ಮಜ ಸಕಲ ಧರ್ಮಾ-
ವಳಿಯ ಸಾರವನೆನಲು ಯಕ್ಷನ
ಬಲುಮೊಗವನೀಪಾಲನತಿ ಪರಿತೋಷದಲಿ ನುಡಿದ ॥ ೪೨

ಗಗನವಬುಧಿಗೆ ಸರಿ ಸರೋವರ
ಜಗಕೆ ಹಿತವನು ಶಕ್ರ ಮತ್ರ್ಯಾ-
ಳಿಗಳ ಮಾತಾರೂಪು ಗೋವುಗಳಿದು ನಿದಾನ ಕಣಾ
ಬಗೆಯಲಗ್ಗದ ಸತ್ಯವೆಂಬುದು
ಗಗನಮಣಿಗೆಣೆಯೆನಲು ಚಿತ್ತಕೆ
ಸೊಗಸಿ ತಲೆದೂಗಿದನು ಮಗುಳಿಂತೆಂದನಾ ಖಚರ ‖ ೪೩

ನಯವಿದನೆ ಕೇಳಾವನೈ ಕ್ಷ-
ತ್ರಿಯನು ವಿಪ್ರನೊಳಾವನೈ ಶ್ರೋ-
ತ್ರಿಯನು ಸುಜನರೊಳಾವನೈ ಮಹಪುರುಷನೆಂಬುವನು
ನಿಯತ ಧೀರನದಾರು ದೇವ-
ಪ್ರಿಯನದಾವನು ಕಠಿಣ ಕಷ್ಟಾ-
ಶ್ರಯನದಾವನು ಧರ್ಮಸುತ ಹೇಳೆಂದನಾ ಖಚರ ‖ ೪೪

ಧೃತಿಯುತಕ್ಷತ್ರಿಯನು ವೇದ-
ವ್ರತಯುತಶ್ರೋತ್ರಿಯನಹಿಂಸಾ
ರತನು ಮಹಪುರುಷನು ಸುಧೀರನು ಸಾಧುಸೇವಕನು
ಸತತ ಪರರುಪಕಾರಿ ದೇವ-
ಪ್ರತತಿವಲ್ಲಭ ಪರರ ಗುಣದು-
ನ್ನತಿಯ ಸೈರಿಸದವನೆ ಕಷ್ಟನು ಯಕ್ಷ ಕೇಳೆಂದ ‖ ೪೫

ನಿಂದ್ಯನಾವನು ಲೋಕದೊಳಗಭಿ-
ವಂದ್ಯನಾವನು ಜೀವವಿರೆ ಮೃತ-
ನೆಂದೊಡಾವನು ದೇಶಕಳಿವಹುದಾವ ತೆರದಿಂದ
ಸಂದ ಯಜ್ಞವದೆಂತು ಕೆಡುವುದು
ತಂದೆ ಹೇಳೆನೆ ಧರ್ಮಸುತ ಸಾ-
ನಂದದಿಂದವೆ ಕಾಣಿಸಿದನಾ ಖಚರಗುತ್ತರವ ‖ ೪೬

ಕೇಳು ಪರನಿಂದಕನೆ ನಿಂದ್ಯನು
ಹೇಟಲೇಂ ಪರಹಿತನೆ ವಂದ್ಯನು
ಹೇಟಿಿದಿಚ್ಛೆಗೆ ನಡೆವ ನೃಪತಿಗೆ ಕೆಡುವುದಾ ದೇಶ
ಕೇಳು ನಡೆವೆಣನೇ ದರಿದ್ರನು
ಸಾಲದೆಣಿಸಿದ ದಕ್ಷಿಣೆಯು ಯ
ಜ್ಞಾಳಿ ನಿಷ್ಫಲವೆಂದು ನುಡಿದನು ರಾಯಕೌಂತೇಯ || ೪೭

ನರಕಿಯಾವನು ಸುಜನರಲಿ ಬಾ-
ಹಿರನದಾವನು ಲೋಕವಱಿಯಲು
ಹರಣವಿರೆ ಹೊಂದಿದನದಾವನು ಭೂಮಿಪಾಲರಲಿ
ಮರುಳನಾವನು ಮಾನಭಂಗದಿ
ಭರಿತನಾವನು ಹೇಟು ಧರ್ಮಜ
ಸರಸಿಯಲಿ ಬಟಿಕುದಕವನು ಕುಡಿಯೆಂದನಾ ಖಚರ || ೪೮

ಎನೆ ಕೃತಘ್ನನೆ ನರಕಿ ವಿದ್ಯಾ-
ಧನಮದಾಂಧನೆ ಬಾಹಿರನು ಹೊ-
ಕ್ಕನುವರವ ಹಿಂಗುವ ಮಹೀಪತಿ ಜೀವವಿರೆ ಮೃತನು
ವಿನುತ ಗುರುವಱಿಯದನೆ ಮರುಳಂ-
ಗನೆಯರಲಿ ವಿಶ್ವಾಸಪರನೇ
ಜನವಱಿಯಲಭಿಮಾನಹೀನನು ಯಕ್ಷ ಕೇಳೆಂದ || ೪೯

ಒಲಿದನೊಡಲನು ಧರ್ಮಸಂಗತಿ-
ಗಳ ಸುಸಂವಾದದಲಿ ನಿಜ ತನು
ಪುಳಕ ಗಬ್ಬರಿಸಿದುದು ಸಲೆ ನೀಗಿದುವು ದುಷ್ಕೃತವ
ಎಲೆ ಮಹೀಪತಿ ಮೆಚ್ಚಿದೆನು ಬೇ-
ಡಟಿದ ತಮ್ಮಂದಿರಲಿ ಒಬ್ಬನ
ತಲೆಯ ಬದುಕಿಸಿ ಕೊಡುವೆನೆನೆ ಯಮತನುಜನಿಂತೆಂದ || ೫೦

ಅಸುವನಿತ್ತೈ ಯಕ್ಷಪತಿ ಜೀ-
ವಿಸಲಿ ನಕುಲನು ಧನ್ಯ ತಾನೆನೆ
ನಸುನಗುತ ಚೇತರಿಸಿ ಮೈಮುಱಿದೆದ್ದನಾ ನಕುಲ
ನಿಶಿತಮತಿ ಮೆಚ್ಚಿದೆನು ಮಗುಱಿ-
ನ್ನಸುವನೊಬ್ಬಂಗಿತ್ತೆನೆನೆ ಜೀ-
ವಿಸಲಿ ಸಹದೇವಾಂಕನೆಂದನು ಧರ್ಮನಂದನನು ॥ ೫೧

ಜನಪ ನಿನ್ನಾಳಾಪವೆನ್ನಯ
ಮನಕೆ ವಿಸ್ಮಯವಾಯ್ತು ಭೀಮಾ-
ರ್ಜುನರು ನಿನ್ನೊಡಹುಟ್ಟಿದರು ನೀನವರಿಗತಿಹಿತನು
ಅನುಜರವರಿರಲೇಕೆ ಮಾದ್ರಿಯ
ತನುಜರೆಚ್ಚರ ಬಯಸಿದೈ ಹೇ-
ಳೆನಲು ನಸುನಗೆ ಮೊಳೆಯೆ ನುಡಿದನು ಧರ್ಮನಂದನನು ॥ ೫೨

ಸಾವು ಬೊಪ್ಪಂಗಾಗೆ ಮಾದ್ರೀ
ದೇವಿ ತನ್ನನು ಕರೆದು ಶಿಶುಗಳ-
ನೋವು ಕೇಡಿದು ನಿನ್ನದಾರೈದಿವರ ಸಲಹುವದು
ಭಾವಭೇದವನಣುವ ಬಗೆಯದೆ
ಕಾವುದೈ ಎಲೆ ಮಗನೆ ಬೆಸಸಿದ-
ಳಾವ ಪರಿಯಲಿ ಮಱೆವೆನೈ ಮಾದ್ರೀಕುಮಾರಕರ ॥ ೫೩

ಎನಲು ಮೆಚ್ಚಿದನಳಿದ ಭೀಮಾ-
ರ್ಜುನರ ಹರಣವನಿತ್ತು ನಿಜನಂ-
ದನನನಪ್ಪಿದನೊಲವು ಮಿಗೆ ಯಮರಾಜನೈತಂದು
ತನುಜ ಸಾಕಿನ್ನಾಯ್ತು ನಿಮಗೀ
ವನನಿವಾಸವು ಬೀಳುಕೊಡಿ ಮುನಿ-
ಜನವನಿನ್ನಜ್ಞಾತವಾಸಕೆ ಮನವ ಮಾಡೆಂದ ॥ ೫೪

೬

# ಬಸವಪ್ಪಶಾಸ್ತ್ರಿಗಳು

## ಶ್ಲೋಕಚತುಷ್ಟಯ

ಕಳವಳವಾಂತುದೆನ್ನೆರ್ದೆ ಶಕುಂತಳೆ ಪೋದಪಳೆಂದು ಕಂಠಮು-
ಸ್ಮಳಿಸುವುದೊತ್ತುವಶ್ರುಭರದಿಂ ಜಡಮಾದುದು ದೃಷ್ಟಿ ಚಿಂತೆಯಿಂ-
ಬಲಿನಿತಾಗೆ ಕಾಡಮನುಜಂಗೆನಗಂ ಕಡು ನೇಹದಿಂದಮಿ-
ಸ್ನೞಿದ ಗೃಹಸ್ಥರಾತ್ಮಭವೆಯಂ ಕಳುಪುತ್ತಕಟೆಂತಱಲ್ವರೋ ॥ ೧

ಜಲವನದಾವಳೀಂಟಲೆಱೆದಲ್ಲದೆ ನಿಮ್ಮಯ ಪಾತೆಗಂಬುವಂ
ಳಿರ್ಗಳ ಕೊಯ್ಯಳಾವಳೊಲವಿಂ ಮಿಗೆ ಸಿಂಗರದಾಸೆಯುಳ್ಳೊಡಂ
ಲರ್ಗಳ ತಾಳೆ ನೀವು ಮೊದಲುತ್ಸವವಾಂತಪಳಾವಳಾ ಶಕುಂ-
ಳೆ ಪತಿಸದ್ಮಕೈದಿದಪಳಾಕೆಗನುಜ್ಞೆಯನೀವುದೆಲ್ಲರುಂ ॥ ೨

ಪಿರಿದುಂ ಚಿಂತಿಸಿ ಸಂಯಮಾರ್ಥರೆನಿಪೆಮ್ಮಂ ಮೇಣ್ ಭವದ್ವಂಶದೆ-
ತ್ತರಮುಂ ನಿನ್ನೊಳಗೀಕೆ ತಾನೆಯೊಲವೆತ್ತಾ ಪಾಂಗುಮಂ ಪೆಂಡಿರೊಳ್
ರಿಗಂಡೀಕೆಯ ನೀಂ ಬರ್ದುಂಕಿಪುದು ಭಾಗ್ಯಾಧೀನಮಿನ್ನಿಂತಱಿಂ
ಱಿತೆಲ್ಲಂ ಬಗೆಯಲ್ಕದಂ ನುಡಿವುದಲ್ಲಂ ದಲ್ ವಧೂಬಂಧುಗಳ್ ॥ ೩

ಪಿರಿಯರ ಸೇವೆಗೆಯ್ ಸವತಿಯರ್ಕಳೊಳಿಷ್ಟವಯಸ್ಯೆಯಂದದಿಂ-
ಡು ಪತಿಯೊರ್ಮೆ ಹೇವಗೊಳಿಸಲ್ ಮುಳಿಸಿಂ ಪ್ರತಿಕೂಲೆಯಾಗದಿರ್
ರಿಜನವಂ ಕರಂ ಸಲಹು ಭಾಗ್ಯದೆ ಬಾಗಿರು ಪೆಣ್ಗಳಿಂತಿರಲ್
ರಶಿಯರಪ್ಪರಿಂತಿರದರನ್ವಯಕಾಧಿಯನುಂಟುಮಾಳ್ಪರೌ ॥ ೪

೭

# ಶಾಂತಕವಿ

## ರಕ್ಷಿಸು ಕರ್ನಾಟಕದೇವಿ

ರಕ್ಷಿಸು ಕರ್ನಾಟಕ ದೇವೀ, ಸಂ-
ರಕ್ಷಿಸು ಕರ್ನಾಟಕ ದೇವೀ ||

ಕದಂಬಾದಿಸಂಪೂಜಿತ ಚರಣೆ
ಗಂಗಾರಾಧಿತ ಪದನಖ ಸರಣೆ
ಚಲುಕ್ಯರುತ್ತಮ ಕಾಂಚೀಕಿರಣೆ
ರಾಷ್ಟ್ರಕೂಟಮಣಿಕಂಠಾಭರಣೆ
ಚಾಲುಕ್ಯಾಂಶುಕಶೋಭಾವರಣೆ

ಯಾದವಮಣಿ ಕಂಕಣಾಂಶು ಸುಂದರಿ
ಬಲ್ಲಾಳರ ಭುಜಭೂಷಣಬಂಧುರೆ
ವಿಜಯನಗರ ಮಂಗಲಮಣಿಕಂಧರೆ
ಮೈಸೂರೊಡೆಯರ ಸುಕೀರ್ತಿಮಂದಿರೆ
ಮಾಂಡಲಿಕಾವನಿ ಭಾರಧುರಂಧರೆ

ಮತಸುಸ್ಥಾಪಕಸ್ಥಾಪಿತಪ್ರಾಣೆ
ಶಿಲ್ಪಕಲಾಮಂಟಪ ಸುಸ್ಥಾನೆ
ಕವಿಜನಕೀರ್ತಿತ ಸುಯಶಸ್ತ್ರಾಣೆ
ಸಾಧು ಸತ್ಕಥಾ ಭೇರೀಧ್ವಾನೆ
ಸ್ವೇತಿಹಾಸ ನೀರಾಜನ ರಾಣಿ

—ಶಾಂತಕವಿ

೮

# ಪಂಜೆ ಮಂಗೇಶರಾಯರು

## ತೆಂಕಣಗಾಳಿಯಾಟ

ಬರಲಿದೆ ! ಆಹಹಾ ! ದೂರದಿ ಬರಲಿದೆ
ಬುಸುಗುಟ್ಟುವ ಪಾತಾಳದ ಹಾವೋ ?
ಹಸಿವಿನ ಭೂತವು ಕೂಯುವ ಕೂವೋ ?
ಹೊಸತಿದು ಕಾಲನ ಕೋಣನ ಓವೋ !
ಉಸಿರಿನ ಸುಯ್ಯೋ ? ಸೂ ಸೂಕರಿಸುತ
ಬರುವದು ಭರಭರ ಭರದಲಿ ಬರುವದು

ಜೊಬ್ಬೆಯ ಹಬ್ಬಿಸಿ ಒಂದೇ ಬಾರಿಗೆ
ಉಬ್ಬರ ಎಬ್ಬಿಸಿ ಕಡಲಿನ ನೀರಿಗೆ
ಬೊಬ್ಬುಳಿ ತೆರೆಯನು ದಡಕ್ಕೆ ಹೊಮ್ಮಿಸಿ
ಅಬ್ಬರದಲಿ ಭೋರ್‌ಭೋರೆನೆ ಗಮ್ಮಿಸಿ
ಬರುತದೆ ! ವೈತೋರದೆ ಬರುತದೆ ! ಅದೆ-

ನಡು ಮುರಿಯುತ ನಗ ನಾವೆಗೆ ಕೂವೆಗೆ
ಉಡಿಸಿದ ಹಾಯಿಯ ಹರಿಯುತ ಬಿರಿಯುತ
ಹಡಗನು ಕೀಲಿಸಿ ತುಮುರನು ತೇಲಿಸಿ
ದಡದಲಿ ಝಾಡಿಸಿ ದೋಣಿಯನಾಡಿಸಿ
ಇದೆ ! ಇದೆ ! ಬರುತಿದೆ ! ಇದೆ ! ಇದೆ ! ಬರುತಿದೆ

ಹಕ್ಕಿಯ ಕಣ್ಣಿಗೆ ಧೂಳಿನ ಕಾಡಿಗೆ
ಇಕ್ಕುತ ಹೊಲದೆತ್ತಿಗೆ ದನ ಕಾಡಿಗೆ
ಫಕ್ಕನೆ ಹಟ್ಟಿಗೆ ಅಟ್ಟಿಸಿ ಕಾಡಿಗೆ
ಸಿಕ್ಕಿದ ಕಿಚ್ಚನು ಊದಲು ಹಾರುತ
ಬರುತಿದೆ ! ಇದೆ ! ಇದೆ ! ಇದೆ ! ಇದೆ ! ಬರುತಿದೆ

ಸಡಲಿಸಿ ಮುಡದಿಯುರುಡಿಯನು ಮುಡಿಯನು
ಬಡ ಮುದುಕರ ಕೊಡೆಗರಿ ಹರಿದಾಡಿಸಿ
ಹುಡುಗರ ತಲೆತಲೆ ಟೊಪ್ಪಿಯ ಆಟವ
ದಡಬಡನಾಡಿಸಿ ಮನೆಮನೆ ತೋಟವ
ಅಡಿಮೇಲಾಗಿಸಿ ತೆಂಗನು ಲಾಗಿಸಿ
ಅಡಕೆಯ ಬಾಗಿಸಿ ಪನೆ ಇಬ್ಬಾಗಿಸಿ
ಬುಡದೂಟಾಡಿಸಿ ತಲೆ ತಾಟಾಡಿಸಿ
ಗುಡಿಸಲವಾಡನು ಹುಲುಹುಲು ಮಾಡಿಸಿ
ಬಂತೈ ! ಬಂತೈ ! ಇದೆ ! ಇದೆ ! ಬಂತೈ

ಗಿಡಗಿಡದಿಂ ಚೆಲು ಗೊಂಚಲು ಮಿಂಚಲು
ಮಿಡಿಯನು ಹಣ್ಣನು ಉದುರಿಸಿ ಕೆದರಿಸಿ
ಎಡದಲಿ ಬಲದಲಿ ಕೆಲದಲಿ ನೆಲದಲಿ
ಪಡುವಣ ಮೋಡವ ಬೆಟ್ಟಕೆ ಗಟ್ಟಕೆ
ಹೊಡೆದಟ್ಟುತ ಕೋಲ್ ಮಿಂಚನು ಮಿರುಗಿಸಿ
ಗುಡುಗನು ಗುಡುಗಿಸಿ ನೆಲವನು ನಡುಗಿಸಿ
ಸಿಡಿಲನು ತಾಳೆಗೆ ಬಾಳೆಗೆ ಎರಗಿಸಿ
ಜಡಿಮಳೆ ಸುರಿವೋಲ್ ಬಿರುಮಳೆ ಬರುವೋಲ್
ಕುಡಿನೀರನು ಒಣಗಿದ ನೆಲಕೆರೆವೋಲ್

ಬಂತ್ಯೆ ಬೀಸುತ ! ಬೀಸುತ ಬಂತ್ಯೆ !
ತೆಂಕಣಗಾಳಿಯು ಕೊಂಕಣಸೀಮೆಗೆ
ಬಂತ್ಯೆ ! ಬಂತ್ಯೆ ! ಬಂತ್ಯೆ ! ಬಂತ್ಯೆ

ಕವಿಶಿಷ್ಯ

೯

# ಮಧುರಚೆನ್ನ

## ನನ್ನನಲ್ಲ

ನಿಲ್ಲು ನಿಲ್ಲೆಲೆ ನವಿಲೆ ನಿನ್ನ ಕಣ್ಣುಗಳೇಸು
ಕಣ್ಣಬಣ್ಣಗಳೇಸು ಎಣಿಸಲಾರೆ
ಎಲ್ಲ ರೂಪಿಸಿದವನು ಎಲ್ಲಿ ತಾನಡಗಿದನೆ
ತಾಳಲಾರದು ಜೀವ ಹೇಳಬಾರೇ ॥ ೧

ಪಿಳುಕಿಸದ ಸಿರಿಗಣ್ಣು ಸುತ್ತು ಚಿನ್ನದ ರೇಖೆ
ಬೆಳ್ಳಿಮಿರುಗಿನ ಮೈಯ ಕಾಂತಿ ನಿನಗೆ
ತಿಳಿಗಂಗೆ ನಮ್ಮವ್ವ ಮೀನಮೂರುತಿ ತಿಳಿಸೊ
ನನ್ನೊಡೆಯನಡಗಿರುವನಾವಕಡೆಗೆ ॥ ೨

ಆರದಾರತಿ ಹಿಡಿದು ಹಾರುತಿರುವವಳಾರೆ
ಹೊನ್ನಿ ಏ ಹೊನ್ನಿ ನೀನಾರೆ ಬಾರೇ
ಯಾರಿಗಾರತಿ ಒಯ್ವಿ ಹೇಳೆ ನಾನೂ ಬರುವೆ
ನನ್ನರಸನಿದ್ದಾನು ಅಲ್ಲಿಯಾರೇ ॥ ೩

ಸಣ್ಣದನಿಯವಳಾರೆ ನುಣ್ಣದನಿಯವಳಾರೆ
ಹೆಣ್ಣದನಿಗೈವ ಕೋಗಿಲೆಯೆ ಬಾರೇ
ಕಣ್ಣುತಪ್ಪಿಸಿದವನ ಕುರುಹು ಹೇಳೇ ತಾಯಿ
ಬನದಮ್ಮ ನೀನಾರೆ ಕರುಣತೋರೇ ॥ ೪

ಮಾಣಿಕದ ಮೂಗಿನವ ಮೈ ಪಚ್ಚರತ್ನದವ
ಹಣ್ಣು ಕುಕ್ಕುತ ಹಾರುವಣ್ಣ ಬಾರೋ
ಜಾಣರಂಗಯ್ಯ ತಾ ಕಾಣದಡಗಿದನೆಲ್ಲಿ
ಗಿಣಿರಾಮ ನೀನಾರೆ ಸುದ್ದಿ ಬೀರೋ ॥ ೫

ಬೆಳದಿಂಗಳಿರುಳಲ್ಲಿ ನಟ್ಟನಡುರಾತ್ರಿಯಲಿ
ಸಪ್ಪಳಿಲ್ಲದ ಗಪ್ಪುಗಾರಿನಲ್ಲಿ
ಕೊಳದ ಬಾಂದಳದಲ್ಲಿ ಟಿಂವ್‌ಗುಡುವ ಟೀಂವಕ್ಕಿ
ನೀನಾರೆ ಬಲ್ಲೆಯಾ ನಲ್ಲನೆಲ್ಲಿ ॥ ೬

ಬಿರುಗಣ್ಣು ಮಲ್ಲಿಗೆಯೆ ಸರಿಯೆ ನಿನಗೀ ಮೌನ
ಕಣ್ಣಿಲ್ಲದವರು ಕಂಡಿಲ್ಲದಿರಲಿ
ಸಿರಿವಂತರಾ ಮಗಳು ಸೊರಗಿ ಸಾಯುತಲಿರುವೆ
ಪುರುಷನೆಡೆ ಹೇಳಮ್ಮ ಪುಣ್ಯ ಬರಲಿ ॥ ೭

ಬಹುರಸದ ಮೊಲೆಯುಣಿಸಿ ಜೀವ ತಣಿಸುವ ತಾಯಿ
ಸರ್ವರಾಧಾರೆ ಭೂದೇವಿ ತಾಯೀ
ಬಹಳ ಬೇಡುವಳಲ್ಲ ನನ್ನ ರಾಯನ ಸೊಲ್ಲ
ನೀನಾರೆ ಹೇಳಿಕೊಡಬಾರೆ ತಾಯೀ ॥ ೮

ಇಲ್ಲಿಯೂ ಮುಗಿಯದವ ಅಲ್ಲಿಯೂ ಮುಗಿಯದವ
ಎಲ್ಲಿಯೂ ಮುಗಿಯದಾಕಾಶ ತಂದೇ
ಎಲ್ಲಿ ನನ್ನರಸನಿಹನೆಲ್ಲಿ ನನ್ನಾಶ್ರಯವು
ಕೈಮುಗಿವೆ ಹೇಳೆನ್ನನಂತ ತಂದೇ ॥ ೯

ಎಂದಿಗೂ ಇದ್ದವನು ಎಂದಿಗೂ ಇರುವವನು
ಜ್ಯೇಷ್ಠನೇ ಶಾಶ್ವತನೆ ಕಾಲನಟನೇ
ಹಿಂದು ಮುಂದರಿಯದಲೆ ಕುಣಿಯುವೆನು ನಿನ್ನೊಡನೆ
ನನ್ನ ರಾಯನ ನೆಲೆಯ ತೋರು ಗಡನೆ || ೧೦

ಹೆರಳು ಮುತ್ತಿನ ರಾಶಿ ಸೆರೆಸೂರೆ ಮುಗಿಲಲ್ಲಿ
ಅಂತರದೊಳೆತ್ತಿ ತೇಲಿಸುವ ಶಕ್ತೀ
ಹೊರಳಿ ನೋಡೆನ್ನ ಸ್ಥಿತಿ ಸೂರ್ಯಚಂದ್ರರ ಕಣ್ಣು
ತೆರೆದು ನೋಡೆನ್ನ ಗತಿ ಹೇಳೆ ಯುಕ್ತೀ || ೧೧

ತೀರ ಸನಿಯೆಂದರೂ ತೀರ ದೂರದೊಳಿರುವಿ
ಸಾವಿರಬ್ಜದ ಗಾವುದಂಗಳಾಚೆ
ತೋರಿ ನಗೆ ಬೀರಿ ನೀನೇನು ಹೇಳುವಿ ಚಿಕ್ಕೆ
ಏನೆಂದು ಭಾವಿಸಲಿದೇನು ಸೂಚೇ || ೧೨

ತೋರಲಾರದ ಗಾಳಿ ತಟ್ಟೆ ತಿಳಿಸುವಿಯೇನು
ಯಾವ ನಾಡಿನ ಸೀಮೆ ಸುಳಿದು ಬಂದೇ
ಮೀರಿತೆನ್ನಯ ತಾಪ ಆರಿಸೆನ್ನಯ ತಂದೆ
ನನ್ನರಾಯನ ಸುದ್ದಿ ಸಾರು ಇಂದೇ || ೧೩

ಹಗಲು ನೆರಳಿನ ನಾರಿ ಮುಗಿಲು ಮುಚ್ಚಿದ ನಾರಿ
ಇರುಳಲ್ಲಿ ಕಗ್ಗಕತ್ತಲೆಯ ನಾರಿ
ಮಿಗಿಲು ಮಾಟದ ನಾರಿ ತೋರೆ ನಲ್ಲನ ದಾರಿ
ಕಾಳಿಕಿಂಕಾಳಿ ಸೀ ಮರುಕದೋರಿ || ೧೪

ನಿದ್ರಿಸುವ ಕತ್ತಲೆಯೆ ಕನಸಿಡುವ ತಳಬೆಳಕೆ
ಜಾಗ್ರತದ ಕಿಚ್ಚೆ ನೀನಾರು ಹೇಳು
ನಿದ್ರೆಬಾರದೆ ನಿಂತು ಸೋತು ಸಣ್ಣಾಗಿಹೆನು
ರಾಜರಾಜನ ಠಾವ ತೋರಿಸೇಳು ‖ ೧೫

ಕಣ್ಣುಮುಚ್ಚಲು ಮಣ್ಣು ಕಣ್ಣುಬಿಚ್ಚಲು ಬಣ್ಣ
ಕಣ್ಣೆನಾಚೆಯ ನಿನ್ನ ರೂಪವರಿಯೆ
ಹಣ್ಣಾದೆ ಸುಣ್ಣಾದೆ ಸಣ್ಣಾದೆ ಕಳವಳಿಸಿ
ಮರೆತು ಮಲಗಿದ ದೊರೆಯ ತೋರೆಸರಿಯೆ ‖ ೧೬

ಕಣ್ಣುಕಿಂಡಿಯ ಒಳಗೆ ಹಣಿಕಿಹಾಕುವ ಜಾಣಿ
ಒಳಗೆ ಜೀವದ ಬೆನ್ನುಬಡಿವ ಜಾಣೀ
ಕಣ್ಣುಕಾಣದೆ ನಾನು ಕೊರಗಿ ಸಂಕಟಬಡುವೆ
ಚೆಲುವ ಚೆನ್ನಿಗನೆಡೆಯ ತೋರೆ ರಾಣೀ ‖ ೧೭

ತರುವೆ ನೀ ಹೇಳೆನಗೆ ಮರವೆ ನೀ ಹೇಳೆನಗೆ
ಕಲ್ಲೆಕೊರಡೇ ನೆಲೆಯ ಹೇಳಿರೆನಗೆ
ಮೊರೆವೆ "ಕಾಮಾರ್ತಾಹಿ ಪ್ರಕೃತಿ ಕೃಪಣಾಶ್ಚೇತ
ನಾಚೇತನೇಷು"ವೆಂಬಂತೆ ನಿಮಗೆ ‖ ೧೮

ನನ್ನ ಕಣ್ಣೀರಿನಲಿ ಕಲ್ಲು ಕರಗುತಲಿಹುದು
ನನ್ನೊಡನೆ ದಿಕ್ಕು ದನಿಗೊಡುತಲಿಹುದು
ನನ್ನ ನಿಟ್ಟುಸುರಿನಲಿ ಬನವು ಬಾಡುತಲಿಹುದು
ಕರುಳೆಂಬ ಕರುಳೇಕೆ ಕರಗದಿಹುದು ‖ ೧೯

ಬರುವದೇನುಂಟೊಮ್ಮೆ ಬರುವ ಕಾಲಕೆ ಬಹುದು
ಬಯಕೆ ಬರುವದರ ಕಣ್ಸನ್ನೆ ಕಾಣೋ
ಅರಿಯದಾ ಹವಣಿಕೆಯು ಜೀವಜೀವನ ಲೀಲೆ
ಜೀವದೇವನ ಗೂಢವಿಧಿಯು ಕಾಣೋ ||

೧೦

# ಜಾನಪದಕವಿ

## ಬಿಜ್ಜಮಹಾದೇವಿ

ಕುಂತಳೆಯ ಶಿವಪುರವು | ಎಂತು ಹೇಳಲು ಬೇಕು
ಕಂಥೆಕಾಯಕದ ನಾಡಂದು | ಬಿಜ್ಜರದು
ಎಂಥ ಮನೆತನವೊ ಶಿವಮತಕೆ || ೧

ಅಮ್ಮ ಮಹಾದೇವಿಯು | ನಮ್ಮ ದರುಮರದ ಶರಣಿ
ಹೆಮ್ಮೆ ನಮಗಿಂದು ಹಾಡುಪಕೆ | ಹುಟ್ಟಿದಳು
ಸೊಮ್ಮು ಬಿಜ್ಜುರ ಮನೆಯೊಳಗೆ || ೨

ಓಣಿಯಲಿ ಕೂಸುಗಳ | ಕಾಣುತಲಿ ಎತ್ತಿಳಿಸಿ
ಮಾಣಿಸುವಳವರ ನೋವುಗಳ | ನಿತ್ಯದಲಿ
ಜಾಣೆ ಮಾದೇವಿ ಶಿವಶರಣೆ || ೩

ಶಿವಪುರದ ಮಠದೊಳಗೆ | ಶಿವಲೀಲೆ ಹಾಡಿದರು
ಶಿವಗುಂಟಿ ತಾಯಿ ಪರದೇಶಿ | ತಿರಿದುಂಡ
ಶಿವವಾಸ ನಿತ್ಯ ಸುಡುಗಾಡ || ೪

ಹಾಡ ಕೇಳಿದ ಶರಣೆ | ಮಾಡಿದಳು ಬಲು ಚಿಂತಿ
ಕೇಡ ಬಗೆಸುವದೆ ಶಿವ ನಿನಗೆ | ನಾನಿದ್ದು
ನೋಡಿ ಸಲಹುವೆನು ತಾಯಾಗಿ || ೫

ಕೆಂಜೆಡೆಯು ಬಿಟ್ಟಿರುವಿ | ಮಂಡೆ ಹದಗೆಟ್ಟಿಹುದು
ರುಂಡಮಾಲೆಯನೆ ಹಾಕಿರುವಿ | ಕೊರಳೊಳಗೆ
ಕೆಂಡಗಣ್ಣೊಂದು ಹಣೆಯೊಳಗೆ || ೬

ಡೋಗಿಬಟ್ಟಲ ಹಿಡಿದು | ಹೋಗಿ ಜಗದೊಳು ತಿರಿದು
ಜೋಗ್ಯಾಗಿ ಬೂದಿ ಮೈತುಂಬ | ಬಡಕೊಂಡು
ಹೀಗಿದ್ದರೆ ನಾನು ಸಹಿಸುವೆನೆ || ೭

ಹಾವಿನಾಭರಣಗಳು | ಯಾವ ತಾಣದಲುಂಟು
ಸಾವ ಬಗೆಸುವರೆ ಹೆಡೆಹಿಡಿದು | ತರವಲ್ಲ
ಹಾವಗೂಡೇಕೆ ಹುಡುಗಾಟ || ೮

ಸುಡುಗಾಡ ವಾಸವದು | ಕಡೆಗಾಲ ಜೀವನಿಗೆ
ಎಡೆಯಾಗುದೈತಿ ಕಡೆಗೊಮ್ಮೆ | ನಾನಿದ್ದು
ಸುಡುಗಾಡವಾಸ ನಿನಗೇಕೆ || ೯

ತಾಯಿ ಇಲ್ಲದ ನಿನ್ನ | ಕಾಯ ಬಾಡಿದೆ ಶಿವನೆ
ನ್ಯಾಯವೇ ಸಾರಿಹೇಳುವುದು | ಶಿವಲಿಂಗ
ತಾಯಿ ಕಳಕೊಂಡ ಪರದೇಶಿ || ೧೦

ತಾಯಿ-ಬಳ್ಳಿಗೆ ಹೇಳು | ಕಾಯಿ ಹೊಗಳ ಭಾರೆ
ಭಾಯೆ ನಿನ ಭಾರ ನನಗುಂಟಿ | ಮಗುವಾಗು
ತಾಯಾಗಿ ನಗುವೆ ಶಿವಲಿಂಗ ೧೧

ರಂಜಣಗಿ ಅಗ್ಗಣಿಗಿ | ಮಂಜು ಹರಿಯಲು ಕಾಸಿ
ನಂಜುಂಡ ನಿನ್ನ ಎರೆಯುವೆನು | ಮಗನಾಗು
ಕೆಂಜೆಡೆಯ ಹಿಕ್ಕಿ ಹೆಡಸೊಗೆದು || ೧೨

ಪರಿಪರಿಲಿ ಹಲಬುತಲೆ । ಹರಭಜನೆ ಮಾಡುತಲೆ
ಹರಮೆಚ್ಚಿ ಚೀರಿ ಕೂಸಾದ | ಶಿವಶರಣಿ
ಅರಿತು ಕಿವಿಗೊಟ್ಟು ಹರುಷಾಗಿ ೧೩

ದೇವದುಂದುಭಿ ಮೊಳಗಿ | ತೀವಿದವು ಗಗನದೊಳು
ಹೂವ ಮಳೆಗರೆದು ಶಿವಗಣವು । ಹಾಡುತಿರೆ
ಜೀವಲೋಕೆಲ್ಲ ಕಳೆದುಂಬಿ ॥ ೧೪

ಏಳು ಸೂರರ ಬೆಳಕ | ಹೇಳಿ ಹೀಯಾಳಿಸಿತು
ಭಾಳಲೋಚನನ ಶಿಶುರೂಪ | ಶಿವಶರಣಿ
ತಾಳಿ ತಾಯ್ತನವ ಹಾಲುಣಿಸಿ ॥ ೧೫

ಎಣ್ಣೆ ಕಸ್ತೂರಿ ಹೂಸಿ ! ಕಣ್ಣು ಮೂಗನು ತಿದ್ದಿ
ಚೆನ್ನಿಗನ ಚೆಲುವ ಶಂಕರನ | ಎರೆದೆತ್ತಿ
ನನ್ನಿಯಲಿ ಅಪ್ಪಿ ಹಾಲುಣಿಸಿ ॥ ೧೬

ಮನೆಮನೆಗೆ ದಾದಿಯರು । ಒನಪು ಒಯ್ಯಾರಾಗಿ
ತನಯನಿಗೆ ಶಿವಗೆ ಹೆಸರಿಡಲು | ಬರ್ರೆಂದು
ಕೆಣಕೆಣಕಿ ಕರೆಯೆ ನಾರಿಯರು ॥ ೧೭

ನೆರೆಮನೆಯ ರಮಣಿಯರು । ಹಿರೆಮನೆಯ ಚೆನ್ನೆಯರು
ಹರದೆಯರು ಊರ ಮುತ್ತೈದಿ । ಮುದುಕಿಯರು
ನೆರೆದರರಮನೆಗೆ ಕನ್ನೆಯರು ॥ ೧೮

ಹಡದವ್ವ ಮಾದೇವಿ | ತಡಬಡನೆ ಶಾಸಿಯೊಳು
ಬೆಡಗಿನಲಿ ಬಂದು ಮಂಡಿಸಲು | ಐದೇರು
ತಡೆದು ಶಾಸಕ್ಕಿ ಎತ್ತಿದರು ॥ ೧೯

ಚಿನ್ನದಾರತಿ ತುಂಬಿ | ರನ್ನಗಳಸವನಿಟ್ಟು
ಚೆನ್ನೆ ಹರದೆಯರು ಮಂಗಲವ | ಎತ್ತಿದರು
ಹೊನ್ನ ತೊಟ್ಟಿಲಕೆ ಕೂಸ್ಹಾಕಿ || ೨೦

ಬೆರಳಿಗುಂಗರವಿಡಿಸಿ | ಕೊರಳ ಪದಕವ ಹಾಕಿ
ಸಿರಪೇಚು ತಲೆಗೆ ವಜ್ಜರದು | ಉಡದಾರ
ವರ ಮುತ್ತಿನೆಳೆಯ ಕಟ್ಟಿದರು || ೨೧

ಮುತ್ತಿನಾ ಕುಂಚಿಗೆಗೆ | ಒತ್ತಿ ಕುಸುರನು ತೆಗೆದು
ಸುತ್ತ ಮಣಿ ಕೆಚ್ಚಿ ಹೆಣೆದಿರುವ | ಹೊದಿಕೆಯೊಳು
ಬತ್ತಲೆಯ ಚಂದ್ರ ಕೂಸೇನೊ || ೨೨

ಕಂಕಣವ ಬಳಿಯಿಟ್ಟು | ಬಿಂಕದಲಿ ಝಣಕಿಸುತ
ಕಿಂಕರಿಯು ನುಡಿಸಿ ಹಾಡಿದರು | ದನಿಯೆತ್ತಿ
ವಂಕನೋಟಾದ ಚೆಲುವೆಯರು || ೨೩

ಸಾಸಿರದ ಹೆಸರೊಳಗೆ | ಮಾಸದಿರು ಹೆಸರೊಂದು
ಕೂಸ ಶಿವಲಿಂಗ ಹೆಸರಿಟ್ಟು | ಐದೆಯರು
ಬೀಸಿ ತೊಟ್ಟಿಲವ ತೂಗಿದರು || ಜೋ, ಜೋ ೨೪

ಬರಿಯ ತೊಟ್ಟಿಲದೊಳಗೆ | ಹರನೊಬ್ಬ ಮಲಗಿರಲು
ಜರಿಜರಿದು ಜೀಕು ತೊಟ್ಟಿಲಕೆ | ಮಾದೇವಿ
ಹರನಾಟ ನೋಡಿ ಮೈಮರೆತು || ೨೫

ಹೊತ್ತು ಮುಣಗಿತು ಶಿವನೆ | ಸುತ್ತ ಕತ್ತಲವಿಲ್ಲ
ಎತ್ತ ನೋಡಿದರು | ಶಿವಬೆಳಕು ತೇಲುತಲಿ
ಚಿತ್ತವೊಂದಾಗಿ ಜಗವೊಂದು || ೨೬

ಕಣ್ಣ ದಿಟ್ಟಿಯು ನಟ್ಟು । ಸಣ್ಣಾಗಿ ಸೊರಗುವನು
ಮಣ್ಣ ಮೂದಾರಿ ಎಣ್ಣೆಯಲಿ ! ಬಿಡದೆರಚಿ
ಕಣ್ಣ ಬಡಕೊಂಡು ಇಳಿದೊಗೆದು ॥ ೨೭

ಮುಟಗಿ ಮೆಣಸಿನಕಾಯಿ । ಚಿಟಗುಪ್ಪ ಕೈಯೊಳಗೆ
ವಟಗುಡುತ ದಿಟ್ಟ ಇಳಿದೊಗೆದು । ಬೆಂಕಿಯಲಿ
ಕಟುಗಾಗಿ ಕಮರಿ ಹಾರೆಂದು ॥ ೨೮

ಬಿದಿಗಿ ಚಂದ್ರನು ಬೆಳೆದು । ಹುದಗಿರುವ ಬೆಳಕನ್ನು
ಪದಪಿನಲಿ ಸುತ್ತ ಚೆಲ್ವಂತೆ । ಶಿವಕೂಸು
ನೆದರೊಡೆಯುವಂತೆ ದಿನಬೆಳೆದು ॥ ೨೯

ಕೂಸಾದ ಶಿವಲಿಂಗ । ಸೋಸಿ ನೋಡಿದನವಳ
ಸೂಸಿ ಹರಿಯಲಿ ಶಿವಭಕ್ತಿ । ಸಗ್ಗಕ್ಕೆ
ಮಾಸದುಳಿಲೆಂದು ಜಗದೊಳಗೆ ॥ ೩೦

ಶಿವಲಿಂಗನಾಡಿದನು । ಶಿವಲೀಲೆ ನಿತ್ಯದಲಿ
ಶಿವಶರಣೆ ನೋಡಿ ಕಣ್ತುಂಬ । ಹಿಗ್ಗಿರಲು
ನೆವ ತೊಟ್ಟನೊಮ್ಮೆ ಬಳಲುತಲಿ ॥ ೩೧

ಆರು ತಿಂಗಳ ಕೂಸು । ಚೇರೆ ಬದಲಾಯಿಸಿತು
ಚೇರಿ ಮೈ ಸೆಟೆಸಿ ಕಳೆಗುಂದಿ । ಸೆಟೆಬೇನೆ
ತೋರಿಸಿತು ಗುಡ್ಡಿ ಮೇಲೇರಿ ॥ ೩೨

ನೋಡಿ ಬೇನೆಯ ಕೂಸ । ಕೋಡಿ ಹರಿಯಿತು ದುಃಖ
ಬಾಡಿ ಹೋಯ್ತೆಂದು ಎದೆಯುತ್ತು । ಶಿವಶರಣೆ
ಪಾಡ ನೋಡನೆಲೆ ಶಿವಲಿಂಗ ॥ ೩೩

ಅತ್ತು ಕರೆಯಲು ಬೇಡ । ಕುತ್ತು ದಾಟಲು ಬೇಕು
ಸುತ್ತ ನಾಡಿಂದ ಜಾಣರನು । ಕರೆತರಿಸಿ
ಬತ್ತಿರುವ ಕೂಸ ತೋರಿಸಲು ॥ ೩೪

ಮಂತ್ರಗಾರರು ಊದಿ । ಯಂತ್ರಗಾರರು ಕಟ್ಟಿ
ತಂತ್ರಿಗಳು ಸಲಹೆ ನೀಡಿದರು । ಕೂಸಿಗೆಲೆ
ಮಂತ್ರತಂತ್ರಗಳು ಹುಸಿಯಾಗಿ ॥ ೩೫

ರೋಗವರಿಯದೆ ವೈದ್ಯ । ಕಾಗಿಯಾದನು ನೋಡಿ
ಹೋಗಲಾಡಿಸದೆ ಆ ರೋಗ । ಬಲು ಬೆದರಿ
ಬೇಗ ಮನೆಬಿಟ್ಟ ಚಿಂತೆಯಲಿ ॥ ೩೬

ಬೇಸರವ ಮಾಡದಲೆ । ಕೂಸ ತೋರಿಸಲವಳು
ನಾಶವಾಗುತಲಿ ಸಂಪತ್ತು । ಲೆಕ್ಕಿಸದೆ
ಲೇಸಾದರೆ ಸಾಕು ಶಿವಗೂಸು ೩೭

ಎಂದು ಚಿಂತಿಸಿ ನೊಂದು । ಉಂಬಳುಡಳಾ ಶರಣೆ
ನಂಬಿ ಹೇಳಿದುದ ಮಾಡಿದಳು । ಆ ರೋಗ
ಕುಂದದಲೆ ಕೂಸ ಕಂದಿಸಿತು ॥ ೩೮

ಮಗನೆ ನಿನ್ನೊಳು ನಾನು । ಬಗೆಯದಲೆ ಏನೊಂದು
ಹಗಲಿರುಳು ಎತ್ತಿ ಆಡಿಸಿದೆ । ನೀನಿಂದು
ಜಗ ತೊರೆಯೆ ನಾನು ಬಾಳುವೆನೆ ॥ ೩೯

ನಿನಗಾಗೊ ಗೋಳನ್ನು । ಮನ ನೋಡದಿನ್ಮುಂದೆ
ತನಯ ಹರಣವನು ನೀಗುವೆನು । ನಿನ್ನೊಡನೆ
ಎನಗೆ ಸಾಕಿನ್ನು ಈ ಲೋಕ ॥ ೪೦

ಉಪ್ಪರಿಗಿ ಮೇಲಿಂದ। ಧುಪ್ಪೆಂದು ಬೀಳುವಳು
ತಪ್ಪಿದೆನು ಹಾದಿ ನಾನೆಂದು। ಶಿವಲಿಂಗ
ಅಪ್ಪಿದನು ರೂಪ ತೊಟಗೊಂಡು ॥ ೪೧

ಎನ್ನೊಡನೆ ಮಾತಾಡು। ಸನ್ನುತವ ಶಿವಶರಣಿ
ಸನ್ನಿಯಲಿ ತಾಯಿ ನೀನೆನಗೆ। ಮುಣುಗಿದರೆ
ಎನ್ನ ಪಲಹುವರು ಯಾರುಂಟು ॥ ೪೨

ನಿಜಪದವ ನಿನಗೀವೆ। ನಿಜ ಶರಣೆ ಬೇಡೆನ್ನ
ನಿಜರೂಪ ತೋರಿ ಶಿವಲಿಂಗ। ವೆನ್ನುತಲಿ
ಭಜಿಸಿವಳು ಶರಣೆ ಕೈಮುಗಿದು ॥ ೪೩

ಕರುಣಾನಿಧಿ ಶಿವ ನೀನು। ಚಿರಸುಖದಿ ಇರುವಂತೆ
ವರ ನೀಡು ಎನಗೆ ಬೇರೊಂದು। ಬೇಡೆನಲು
ಹರ ನಕ್ಕು ಹರಸಿ ಕರೆದೊಯ್ದ ॥ ೪೪

ಸಂಗ್ರಾಹಕರು:
ಡಾ. ಬಿ. ಎಸ್. ಗದ್ದಗಿಮಠ

# ಟಿಪ್ಪಣಿಗಳು

## ೧. ರನ್ನ: ಸಂಜಯಸುಯೋಧನಸಂವಾದ

ಖ್ಯಾತಿವೆತ್ತ ಕನ್ನಡದ ಕೆಲವು ಕವಿಗಳಲ್ಲಿ ರನ್ನನೊಬ್ಬನು. ಈತನ ಗದಾಯುದ್ಧವು ಕನ್ನಡಸಾಹಿತ್ಯದ ಉತ್ತಮ ಕೃತಿಗಳಲ್ಲಿ ಒಂದಾಗಿದೆ. ಅಜಿತಪುರಾಣವೆಂಬ ಧಾರ್ಮಿಕ ಕಾವ್ಯವನ್ನು ಈ ಕವಿಯು ಅತ್ತಿಮಬ್ಬೆಯ ಉದಾರವಾದ ಆಶ್ರಯದಲ್ಲಿ ರಚಿಸಿರುವನು. ಚಾಲುಕ್ಯಚಕ್ರವರ್ತಿ ತೈಲಪನ ಆಶ್ರಯದಲ್ಲಿದ್ದು ಈ ಕವಿಯು ಆತನಿಂದ ಕವಿಚಕ್ರವರ್ತಿ ಎಂಬ ಬಿರುದನ್ನು ಪಡೆದಿದ್ದನು. ಈ ತೈಲಪನ ಮಗನಾದ ಇರಿವ ಬೆಡಂಗದೇವನನ್ನೇ ರನ್ನನು ಭೀಮನೊಡನೆ ಹೋಲಿಸಿ ಗದಾಯುದ್ಧದಲ್ಲಿ ಅಭೇದ ಭಾವನೆಯಿಂದ ವರ್ಣಿಸಿರುವನು.

'ಸಂಜಯಸುಯೋಧನಸಂವಾದ' ಎಂಬ ಭಾಗವನ್ನು ಗದಾಯುದ್ಧದಿಂದ ಆಯ್ದುಕೊಂಡಿದೆ. ಭಾರತಯುದ್ಧದಲ್ಲಿ ಸರ್ವಸ್ವವನ್ನೂ ಕಳೆದ್ಕೊಂಡ ಸುಯೋಧನನ ಸ್ವಭಾವಚಿತ್ರವನ್ನು ರನ್ನನು ಒಳ್ಳೇ ಸ್ವಾರಸ್ಯಪೂರ್ಣವಾಗಿ ನಿರೂಪಿಸಿದ್ದಾನೆ.

ಪಂಚತ್ವಪ್ರಪಂಚ-ಮರಣ; ಅಸುಹೃತ್-ಶತ್ರು; ಅಮ್ಮ-ಅಪ್ಪ; ಇಸು ಬಾಣಪ್ರಯೋಗಮಾಡು; ತಿರುವಾಯ್-ಹೆದೆಯಮಧ್ಯಭಾಗ; ಜೋಳದ ಪಾಟಿ-ಅನ್ನದ ಋಣ; ಪದುಳ-ನೆಮ್ಮದಿ; ಆಯ-ಶೌರ್ಯ; ಕಮ್ಮ ಅಿಯೋಜ ನುಡಿದಂತೆ ನಡೆಯದವ; ಪಾಟಿ-ಕ್ರಮ; ಬಾಳ್-ಖಡ್ಗ; ಪಂದೆ-ಹೇಡಿ;

ಎಱೆವೆಸ-ಒಡೆಯನ ಕಾರ್ಯ; ಕೈಪೆ ಕಹಿ; ಬಾಹುರಕ್ಕೆ-ಬಾಹುರಕ್ಷೆ; ಸೀಸಕ-ಶೀರ್ಷಕ, ಶಿರಸ್ತ್ರಾಣ; ಭಾರ್ಗವ-ಪರಶುರಾಮ; ಕಂಡೂಯನ-ತೀಟೆ, ಆಸಕ್ತಿ, ಹಮ್ಮದಂಬೋಗು-ಮೂರ್ಛೆಹೊಂದು; ಕೋಟ್ಮೃಗ-ಕೋಡುಳ್ಳ ಮೃಗ; ಪಡಲ್ವಡು-ಚೆಲ್ಲಾಪಿಲ್ಲಿಯಾಗು; ಒಕ್ಕಿಲ್-ಒಕ್ಕಲು; ಬಚರ್-ಎರಗು, ಮೇಲೇರು; ಕುಱಿದಱಿದಱಿ-ಕುರಿಗಳನ್ನು ಕತ್ತರಿಸುವ ಹಾಗೆ ಕತ್ತರಿಸು, ಅಮುಳ್ಗಳ್-ಅವಳಿಜವಳಿ; ಇಳಿಸು-ತಿರಸ್ಕರಿಸು; ಮೃಷಾ-ಸುಳ್ಳು; ಉಡಿ-ಮುರಿ; ಅಡಗು-ಮಾಂಸ; ಬಗಸೆರೆ-ಬೊಗಸೆ; ನಿಸ್ತ್ರಿಂಶತೆ-ನಿಷ್ಕರುಣತ್ವ, ರಾಕ್ಷಸವೃತ್ತಿ; ಪ್ರೋಜ್ಝಿತಚಾಪ-ಬಿಲ್ಲನ್ನು ಬಿಟ್ಟವ; ಸೊಕ-ಸುಖ; ಕಱುತ್ತು ಕೋಪಿಸಿ, ಮಾತ್ಸರ್ಯಪಟ್ಟು; ದರ್ವೀಕರ-ಕೈಯಲ್ಲಿ ಸೌಟುಹಿಡಿದವ, ಅಡಿಗೆಯವ; ದಸ್ರಾತ್ಮಜರ್-ಅಶ್ವಿನೀದೇವತೆಗಳ ಮಕ್ಕಳು, ನಕುಲ, ಸಹದೇವರು, ಏವುದು-ಏನು ಮಾಡುವುದು; ಮೋದು-ಹೊಡೆ; ಅಣುವ-ಹನುಮ; ಕರವೇಟ-ಅತಿಶಯವಾದ ಹೇಡಿ; ಬಿದು-ಕುಂಭಸ್ಥಳ; ಸೊರೆ-ಕುಂಬಳಕಾಯಿ ಪಚ್ಚೆ-ಕಬ್ಬಿಣ; ತುಟಿಲಾಳ್-ಯುದ್ಧವೀರ.

## ೨. ನಾಗಚಂದ್ರ: ಸೀತಾಸ್ವಯಂವರ

ಶೈಲಿಯ ಲಾಲಿತ್ಯಮಾಧುರ್ಯಗಳಲ್ಲಿ ನಾಗಚಂದ್ರನು ಕನ್ನಡ ಸಾಹಿತ್ಯದೊಳಗೆ ಹೆಸರಾದ ಕವಿಯು. ಉದಾತ್ತ ರಾವಣನ ಪಾತ್ರವನ್ನೊಳಗೊಂಡ ಆತನ ರಾಮಚಂದ್ರಚರಿತಪುರಾಣವು ಪಂಪರಾಮಾಯಣವೆಂದು ನಮ್ಮ ಸಾಹಿತ್ಯದಲ್ಲಿ ಪ್ರಸಿದ್ಧವಾಗಿದೆ. ಮಲ್ಲಿನಾಥಪುರಾಣವು ಈ ಕವಿ ಬರೆದ ಒಂದು ಪುರಾಣ ಕಾವ್ಯ.

ನಾಗಚಂದ್ರನಿಗೆ ಅಭಿನವ ಪಂಪ ಎಂಬ ಬಿರುದು ಇದ್ದಿತು. ಈತನ ಕಾಲ ಕ್ರಿ. ಶ. ಸು. ೧೧೦೦.

ಇಲ್ಲಿಯ ಅವತರಣಿಕೆಯು ರಾಮಚಂದ್ರಚರಿತಪುರಾಣದಿಂದ ಆಯ್ದುಕೊಂಡುದು. ಸೀತಾಸ್ವಯಂವರದ ಪ್ರಸಂಗವನ್ನು ಕವಿ ಬಹು ಮನೋಜ್ಞವಾಗಿ ಚಿತ್ರಿಸಿದ್ದಾನೆ.

ಆನಕ-ವಾದ್ಯ; ನಿನದ-ಧ್ವನಿ; ಸ್ಯಂದನ-ರಥ; ಡವಕೆ-ಪೀಕದಾನಿ; ಸುಟ್ಟಿ-ಬೆರಳಿನಿಂದ ತೋರಿಸಿ; ನೆಱೆದಿಂಗಳ-ಪೂರ್ಣಚಂದ್ರ; ತೆಱಂಬೊಳೆ ಹೆಚ್ಚಾಗಿ ಪ್ರಕಾಶಿಸು; ಚಂಚರೀಕ-ಭ್ರಮರ; ಕೀಕರ-ಕಡೆಗಣ್ಣೋಟ; ಆಶಾ ಕರಿ-ದಿಗ್ಗಜ; ಲುಂಟಾಕ-ಕಳ್ಳ, ಹಾಳು ಮಾಡುವವ; ಶಂಪಾ-ಮಿಂಚು; ದೀರ್ಣ-ತೆರೆದ; ಅಂಗಾರ-ಕೆಂಡ; ಅರ್ಗಿಸು-ಹಬ್ಬು, ಅವ್ವಳಿಸು-ವ್ಯಾಪಿಸು; ಎರ್ದೆಗಿಡು-ಧೈರ್ಯಗುಂದು, ಅವಷ್ಟಂಭ-ಗರ್ವ, ಸ್ಥೈರ್ಯ, ರಾವ-ಧ್ವನಿ, ಕಕುಭ-ದಿಕ್ಕು, ಅಗುರ್ವು-ಭಯ, ಬಿಗುರ್ಗಿಸುವ-ಭೀಕರವಾದ, ಉಕ್ಕೆವ-ಉತ್ಸವ, ಕಾಳಿಕ-ಸರ್ಪ, ಅವಘಟಿತ-ಅಮಂಗಳಕಾರ್ಯ, ಬಲ್ಗರ-ಬಲವಾದ ಪಿಶಾಚಿ ಪೆಡಂಮುಗುಳು-ಹಿಂದಿರುಗು; ಸಹಸ್ರೇಕ್ಷಣ-ಇಂದ್ರ; ಜೆಳ್ಕುಱು-ಹೆದರು ಬೆಕ್ಕಸಮುತ್ತರ್-ಆಶ್ಚರ್ಯಪಟ್ಟವರು; ನಿಚೋಲಕ-ಕವಚ, ಶೋಹಣಶೈಲ-ಮೇರುಪರ್ವತ; ಏರಂಡಕಾಂಡ-ಔಡಲದೇಟು; ಕೊಪ್ಪು-ಬಿಲ್ಲಿನ ತುದಿ; ಕರ್ಪರ-ಬೆನ್ನ ಚಿಪ್ಪು; ನಳಿದು-ಬಗ್ಗಿ, ಸಿತಾತಪತ್ರ-ಶ್ವೇತಛತ್ರ, ಪೀಲಿಡಳೆ ನವಿಲುಗರಿಯ ಕೊಡೆ; ನವೋರು-ಕುರಗಿ ಗಿಡ, ಸವನ; ಸ್ನಾನ.

## ೩. ಹರಿಹರದೇವ : ಮಲುಹಣನ ರಗಳೆ

ಹರಿಹರದೇವನು ಕನ್ನಡ ಕಾವ್ಯ ಪ್ರಪಂಚದಲ್ಲಿ ಕ್ರಾಂತಿಯನ್ನುಂಟು ಮಾಡಿ ಹೊಸಹಾದಿಯನ್ನು ಕಲ್ಪಿಸಿದ ಹಿರಿಯ ಕವಿಯು. ಗಿರಿಜಾಕಲ್ಯಾಣ, ಶಿವಗಣದ ರಗಳೆಗಳು, ಪಂಪಾಶತಕ, ರಕ್ಷಾಶತಕ ಮುಂತಾದ ಕಾವ್ಯಗಳನ್ನು ರಚಿಸಿ ಕನ್ನಡ ಕಾವ್ಯ ಭಾಂಡಾರದ ಸಂಪತ್ತನ್ನು ಹೆಚ್ಚಿಸಿರುವನು. ಈತನ ಕಾಲ ಕ್ರಿ. ಶ. ಸು. ೧೨೦೦.

ಸಂಸಾರದಸಾರದಲ್ಲಿ ಮುಳುಗಿದ್ದ ಮಲುಹಣನ ವಿರಹಾವಸ್ಥೆಯನ್ನೂ ಆ ವಿರಹವು ತನಿನೇಹವಾಗಿ ಶಿವನ ಮೆಲ್ಲಡಿಗೆ ಸಾರ್ದ ರೀತಿಯನ್ನೂ ಹರಿಹರನು ಬಹು ಸುಂದರವಾಗಿ ನಿರೂಪಿಸಿದ್ದಾನೆ.

ಮುಕುರ–ಕನ್ನಡಿ; ಮಾಡ–ಮನೆ, ಬೈತಿಡು–ತೆಗೆದಿಡು; ತೋಟಿ–ಜಗಳ, ಹೋರಾಟ; ಕರುವಿಡು–ಎರಕಹೊಯ್; ಕರ್ಣಪಾಲಿಕೆ–ಕಿವಿಯ ಹಾಲಿ; ಅಣ್ಣೆ–ಪಾವಿತ್ರ್ಯ; ಸೂಡಗ–ಕಡಗ; ಬಾಹುಪೂರಯ–ನಾಗಮುರಿ; ಕಂಚುಕೆ–ಕುಪ್ಪಸ; ಬಾಸಣಿಸು–ಮುಚ್ಚು; ಸಪುರ–ತೆಳುವಾದ; ಜವಾದಿ–ಸುವಾಸಿತ ಲೇಪನ ದ್ರವ್ಯ: ಯಕ್ಷಕರ್ದಮ–ಒಂದು ಬಗೆಯ ಅನುಲೇಪನ ದ್ರವ್ಯ; ಕೇಳಿಸು–ಆಡಿಸು, ನರ್ತನ ಮಾಡಿಸು; ಸಂವರಣೆ–ಒಟ್ಟುಗೂಡಿಸುವುದು; ಅಂಕೆಕುರುಹು, ಚಿಹ್ನೆ; ಜೋಳಿಸು–ಜೋಡಿಸು, ಹೊಂದಿಸು; ವೃದ್ಧ–ವೃದ್ಧ, ಹಿರಿಯ; ಲಹಣಿ-ತಾಳ; ಆವುಜ-ವಾದ್ಯವಿಶೇಷ; ದೆಖ್ಖಾಳ-ಶೋಭೆ; ಕೌಸಳ–ಕಂಚಿನ ತಾಳ; ಜೇವಣಿಗೆ–ಗಾಯಕಿ; ಪೈಸರಂಬೋಗು–ಹೆಜ್ಜೆ ದಪ್ಪು, ತಾಳದಪ್ಪು; ಕೋರಕ–ಮೊಗ್ಗೆ; ಕುಸುರಿದಱಿ–ಕೀಳುಮಾಡು; ದಗಹ–ಜಗಳ, ಕಾಟ; ಹೇಡೈಸು–ಅಳುಕು; ನಾಲ್ಕೈದವಸ್ಥೆ-೯ (೪+೫) ಅವಸ್ಥೆ; ಕಳಲು–ಕಳವಳಗೊಳ್ಳು; ಕುಳಿ–ಕುಣಿ, ತಗ್ಗು; ತುಹಿನ-ಹಿಮ; ಮಳ್ಗು-ನಾಶವಾಗು.

೪. ರಾಘವಾಂಕ : ಪುರದಪುಣ್ಯಂಪುರುಷರೂಪಿಂದೆ ಪೋಗುತಿದೆ

ರಾಘವಾಂಕನು 'ಜನಬದುಕಬೇಕೆಂಬ' ಸದುದ್ದೇಶದಿಂದ ಘನವಾದ ಕಾವ್ಯಗಳನ್ನು ರಚಿಸಿದ ಕವಿಯು. ಷಟ್ಪದಿಯು ಕನ್ನಡದ ಸೊಲ್ಲಿಗೆ ಸಲ್ಲುವ ಛಂದಸ್ಸೆಂಬುದನ್ನು ಕಂಡು ಹಿಡಿದ ಕೀರ್ತಿಯು ರಾಘವಾಂಕನ ಪ್ರತಿಭೆಗೆ ಸಲ್ಲುತ್ತದೆ. ಅಂತೆಯೇ ತನನ್ನು ಷಟ್ಪದೀ ಸಂಪ್ರದಾಯ ಸಂಸ್ಥಾಪಕನೆಂದು ಕರೆದಿರುವರು. ರಾಘವಾಂಕನು ಹರಿಹರನ ಸೋದರಳಿಯ. ಸೋಮನಾಥ ಚರಿತೆ, ವಿರೇಶಚರಿತೆ, ಶರಭಚಾರಿತ್ರ, ಸಿದ್ಧರಾಮಚಾರಿತ್ರ, ಹರಿಶ್ಚಂದ್ರ ಕಾವ್ಯ, ಹರಿಹರಮಹತ್ವ ಇವು ರಾಘವಾಂಕನು ರಚಿಸಿದ ಕಾವ್ಯಗಳು

'ಪುರದಪುಣ್ಯಂ ಪುರುಷರೂಪಿಂದೆ ಪೋಗುತಿದೆ' ಎಂಬ ಭಾಗವನ್ನು ಹರಿಶ್ಚಂದ್ರ ಕಾವ್ಯದಿಂದ ಉದ್ಧರಿಸಲಾಗಿದೆ. ಹರಿಶ್ಚಂದ್ರನು ವಿಶ್ವಾಮಿತ್ರನಿಗೆ ರಾಜ್ಯಸಮರ್ಪಣ ಮಾಡುವ ದೃಶ್ಯವನ್ನು ರಾಘವಾಂಕನು ಪ್ರತಿಭಾಪೂರ್ಣವಾಗಿ ಚಿತ್ರಿಸಿದ್ದಾನೆ.

ಅಳ್ಳಿಱು-ಬಲವಾಗಿ ಇರಿ; ನಿಸ್ಸಾಳ-ಭೇರಿ; ಇಡುಕುಱು-ದಟ್ಟವಾಗಿಱುವುದು, ಸಾಂದ್ರತೆ; ಕುತ್ತುಱು-ಹೊದರು; ಡಾಳಿಸು-ಬೀಸು; ಸೀಗುರಿ-ಒಂದು ವಿಧವಾದ ಚಾಮರ; ಒಗ್ಗು-ಸಮೂಹ; ಅವಧಾರು-ಕೇಳು; ವಿಸರ ಸಮೂಹ; ಮಾಮಸಕ-ರಭಸ, ಅಗಿ-ಕಚ್ಚು, ಬೆಸಕೈ-ಸೇವಿಸು, ಕುಱುಕಲು ಹುರಿಯುವುದು, ಕಟಕ-ಸೈನ್ಯ, ಬಱಿತ-ಒಣಗಿದ, ಅಕ್ಕಾಡು-ನಾಶಮಾಡು, ಸಂದೋಹ-ಸಮೂಹ, ಸಿವುಡಿ-ಲೆಕ್ಕದ ಪುಸ್ತಕ, ಹೊಸೆ-ಹೊಡೆ, ಆನು-ಎದುರಿಸು, ಮುಗುದ-ಮುಗ್ಧ, ಅಸಿ-ಖಡ್ಗ, ದಟ್ಟಿಸು-ಬೆದರಿಸು, ಅಪ್ಪಯಿಸು-ಒಪ್ಪಿಸು, ಎಕ್ಕಟಿ-ಏಕಾಂತ, ತಗಹು-ಬಂಧನ, ಅನುವಲ್ಲ-ನೆಟ್ಟಗಿಲ್ಲ ತಿರಿಪು-ತಿರುಗಿಸು, ಪಡಿಯ ಬೀಯ-ದಿನದ ಊಟದ ವೆಚ್ಚ, ಹೊಂಕೊಳಿಸು-ಒಪ್ಪಿಸು, ಸೂಱೆ ಕಾಱ-ಸೂರಿ ಮಾಡುವವ ನಾಶ ಮಾಡುವವ.

## ೫. ಕುಮಾರವ್ಯಾಸ : ಯಕ್ಷಪ್ರಶ್ನೆ

ಕುಮಾರವ್ಯಾಸನು ಅತ್ಯಂತ ಜನಪ್ರಿಯರಾದ ಕನ್ನಡಕವಿಗಳಲ್ಲಿ ಒಬ್ಬನು. ಆತನು ಭಾರತವನ್ನು ಭಕ್ತಿಯಿಂದ ಬರೆದಿರುವನು. ಅದು ಗದುಗಿನ ಭಾರತವೆಂದು ಕನ್ನಡದಲ್ಲಿ ಹೆಸರಾಗಿದೆ. ಈ ಕವಿಯ ಕಾಲ ೧೫ನೆಯ ಶತಮಾನದ ಮಧ್ಯಭಾಗವೆಂದು ಇಟ್ಟುಕೊಳ್ಳಬಹುದು.

ಯಕ್ಷಪ್ರಶ್ನೆ ಎಂಬುದು ಅರಣ್ಯಪರ್ವದ ಕೊನೆಯ ಭಾಗದಲ್ಲಿ ಬರುತ್ತದೆ. ಇಲ್ಲಿ ಕೆಲವೊಂದು ನೀತಿಯ ವಿಚಾರಗಳನ್ನೂ ಧರ್ಮಸೂಕ್ಷ್ಮಗಳನ್ನೂ ಕವಿಯು ಹೃದಯಂಗಮವಾಗಿ ವಿವರಿಸಿದ್ದಾನೆ.

ಹೊಮ್ಮಿಱು-ಬಂಗಾರದ ಚಿಗುರು; ಅರಣಿ-ಯಜ್ಞದ ಅಗ್ನಿಗಾಗಿ ಉಪಯೋಗಿಸುವ ಕಟ್ಟಿಗೆಯ ತುಂಡು; ಕಾಳು-ಕೇಡು; ಹರಿತಂದನು-ಓಡಿಬಂದನು; ಅನ್ವಾಧಾನ-ನಿಯಮ; ಬೋಳೆ-ಒಂದು ಬಗೆಯ ಬಾಣ; ಕೇಣ ಉತ್ಸಾಹ; ಕಱುಬು-ಗುಂಪು; ಸಿಡಿವಲೆ-ಒಂದು ಬಗೆಯ ಬಲೆ; ಅಳವಳಿ-ಸಾಮರ್ಥ್ಯಗುಂದು; ಜಾನುಪಘ್ನ-ಮೊಳಕಾಲವರೆಗಿನ; ಮೊಗೆ-ಬೊಗಸೆಯೊಡ್ಡು,

ಗುಹ್ಯಕ-ಯಕ್ಷ; ಅಳ್ಳೆ-ಪಕ್ಕಡಿ; ಜಡಿ-ಬಡಿದುಕೊಳ್ಳು; ಅವಗಡಿಸು-ವ್ಯಾಪಿಸು; ಡಾವರಿಸು-ಹೆಚ್ಚಾಗು; ನಭೋನಿನದ-ಆಕಾಶವಾಣಿ; ಡೆಂಡಣಿಸು-ಮೂರ್ಛೆಹೋಗು; ಮಾಣು-ಬಿಡು; ಕ್ಷೋಣಿ-ಭೂಮಿ; ಪರಿಗ್ರಹ-ಸೊತ್ತು, ಆಸ್ತಿ; ಕೇಣ-ಕೋಪ, ಹಟ; ಸುಯ್ಯು-ಉಸುರು; ಒರಲು-ಹೇಳು; ಉರುವ-ಶ್ರೇಷ್ಠವಾದ; ಅಭ್ರ-ಆಕಾಶ, ಮೇಘ; ಅಗ್ಗದ-ಶ್ರೇಷ್ಠವಾದ; ಹೊಂದು-ಮರಣಹೊಂದು; ಅನುವರ-ಕಾಳಗ; ಬೊಪ್ಪ-ತಂದೆ.

## ಆಧುನಿಕ ಕಾವ್ಯ

ಈ ವಿಭಾಗದಲ್ಲಿ ( ೬, ೭, ೮, ೯, ೧೦ ) ಆಧುನಿಕರಾದ ಕೆಲವು ಕನ್ನಡ ಕವಿಗಳ ಕವನಗಳನ್ನಾಯ್ದುಕೊಂಡಿದೆ. ಬಸವಪ್ಪ ಶಾಸ್ತ್ರಿಗಳು ಹತ್ತೊಂಬತ್ತನೆಯ ಶತಮಾನದ ಪ್ರತಿಭಾವಂತ ಕವಿಗಳು; ಘನವಾದ ಪಂಡಿತರು. ಇವರು ಕೆಲವು ಸ್ವತಂತ್ರ ಕಾವ್ಯಗಳನ್ನು ರಚಿಸಿರುವರು. ಹಲವಾರು ಸಂಸ್ಕೃತ ನಾಟಕಗಳನ್ನು ಕನ್ನಡಕ್ಕೆ ಪರಿವರ್ತಿಸಿರುವರು. ಕಾಳಿದಾಸನ ಶಾಕುಂತಲವನ್ನು ಸಮರ್ಥ ರೀತಿಯಲ್ಲಿ ಕನ್ನಡಿಸಿ ಅಭಿನವ ಕಾಳಿದಾಸ ಎಂಬ ಬಿರುದನ್ನು ಪಡೆದಿರುವರು. ಇಲ್ಲಿ ಆಯ್ದುಕೊಂಡಿರುವ ಶ್ಲೋಕ ಚತುಷ್ಟಯ ಬಸವಪ್ಪ ಶಾಸ್ತ್ರಿಗಳ ಕರ್ನಾಟಕ ಶಾಕುಂತಲ ನಾಟಕದಿಂದ ಉದ್ಧೃತವಾದುದು.

ಶಾಂತಕವಿಗಳು ಉತ್ತರ ಕರ್ನಾಟಕದಲ್ಲಿ ಕನ್ನಡದ ಚಳವಳಿಯ ಪುರಸ್ಕರ್ತರಾದ ಪ್ರಮುಖರಲ್ಲಿ ಒಬ್ಬರು. ಇವರು ಅನೇಕ ಕವನಗಳನ್ನು ಬರೆದಿದ್ದಾರೆ.

ಪಂಜೆಮಂಗೇಶರಾಯರು ದಕ್ಷಿಣ ಕನ್ನಡ ಜಿಲ್ಲೆಯವರು. ಕವಿಶಿಷ್ಯ ಎಂಬ ಕಾವ್ಯನಾಮದಿಂದ ಎಷ್ಟೋ ಕವನಗಳನ್ನು ಬರೆದಿರುವರು ಆಧುನಿಕ ಕನ್ನಡ ಸಾಹಿತ್ಯದ ಹಿರಿಯರಲ್ಲಿ ಇವರೂ ಒಬ್ಬರು.

'ಮಧುರ ಚೆನ್ನ' ಎಂಬ ಹೆಸರು ಕನ್ನಡಿಗರಿಗೆ ಚಿರಪರಿಚಿತವಾಗಿದೆ. ಈ ಕಾವ್ಯನಾಮದಿಂದ ಕವನಗಳನ್ನು ರಚಿಸಿದವರು ಹಲಸಂಗಿ ಚೆನ್ನಮಲ್ಲಪ್ಪನವರು. ಇವರ ಕಾವ್ಯದಲ್ಲಿ ಆಧ್ಯಾತ್ಮ ಮತ್ತು ಸೌಂದರ್ಯ ದೃಷ್ಟಿ ಇವುಗಳ ಸುಂದರವಾದ ಸಮ್ಮಿಲನವನ್ನು ಕಾಣುತ್ತೇವೆ. ಆಧುನಿಕ ಕನ್ನಡ ಸಾಹಿತ್ಯದ ಅಗ್ರಗಣ್ಯರಾದ ಕವಿಗಳಲ್ಲಿ ಮಧುರಚೆನ್ನರೂ ಒಬ್ಬರು. 'ನನ್ನನಲ್ಲ' ಎಂಬ ದೀರ್ಘ ಕವನದಿಂದ ಈ ಭಾಗವನ್ನು ಆಯ್ದುಕೊಂಡಿದೆ.

ಜಾನಪದ ಸಾಹಿತ್ಯದ ಮಾಪರಿಯಿಂದು 'ಬಿಜ್ಜಮಹಾದೇವಿ' ಎಂಬ ಕಥನಕವನದ ಭಾಗವನ್ನು ಕೊಡಲಾಗಿದೆ. ಇದನ್ನು ಡಾ. ಬಿ ಎಸ್. ಗದ್ದಗಿಮಠ ಅವರು ಸಂಗ್ರಹಿಸಿದ ಸಾಲ್ಕುನಾಡಪದಗಳು ಎಂಬ ಹೊತ್ತಗೆಯಿಂದ ಆಯ್ದುಕೊಳ್ಳಲಾಗಿದೆ.